# ಶ್ರೀ ಭಗವದ್ಗೀತಾ

ಶ್ರೀ ಶೇಷನಾಮಾಖ್ಯ ಕವಿಶೇಖರ ವಿರಚಿತ
(**"ಗೀತಾರಂಜನಾಖ್ಯ"** ಕರ್ಣಾಟಕ
ಪದ್ಯರೂಪ ವ್ಯಾಖ್ಯಾನ ಸಮೇತ)

---

ಶ್ರೀ
ಉತ್ತರಾದಿ ಮಠದ ಆಸ್ಥಾನದಲ್ಲಿ ಪಂಡಿತೋತ್ತಮರಾದ
**ಪಾಂಡುರಂಗೀ ಕೃಷ್ಣಾಚಾರ್ಯ**
ರವರಿಂದ ಸಂಶೋಧಿಸಲ್ಪಟ್ಟಿದೆ.

---

ಶ್ರೀ ತಿರುಪತಿ - ತಿರ್ಚಾನೂರಿನ, ಶ್ರೀಮನ್ಮಧ್ವ ಸಿದ್ಧಾಂತಾಭಿ
ವೃದ್ಧಿಕಾರಿಣೀ ಸಭೆಯಿಂದ ಪ್ರಕಟಿಸಲ್ಪಟ್ಟಿದೆ.

೧೯೩೦

**ಬೆಲೆ ೦—೧೨—೦**

# ಅನುಕ್ರಮಣಿಕೆ







ಶ್ರೀ ದಿಗ್ವಿಜಯರಾಮೋವಿಜಯತೆ

# ವಿಷಯ ಸಂಗ್ರಹ.

---

ಶ್ಲೋ.	ಗುಣಗಣನಿಲಯಂ ಪತಿಂರಮಾಯಾ
ಜಗದಘದಹನಂ ಚ ವಾಸವೀಸೂನುಂ
ಮುನಿಕುಲತಿಲಕಂ ಚ ಪೂರ್ಣಬೋಧಂ
ಗುರುಮಪಿ ಪರಮಗುರುಂ ಚ ಮೇ ವಂದೇ

**ದ್ವಾಪರಯುಗದಲ್ಲಿ** ಗೌತಮ ಶಾಪ ಮೊದಲಾದ ಕಾರಣಗಳಿಂದ ಸಜ್ಜನರಲ್ಲಿಯೂ ತತ್ವಜ್ಞಾನ ನಷ್ಟವಾಗಲು, ಸಕಲ ಕಲ್ಯಾಣಗುಣಾತ್ಮಕ ಸುಂದರ ವಿಗ್ರಹವುಳ್ಳ ಶ್ರೀ ನಾರಾಯಣದೇವರು, ಬ್ರಹ್ಮರುದ್ರಾದಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟು, ಧರ್ಮಹಾನಿಯಾದಾಗಲೆಲ್ಲ ಭೂಮಿಯಲ್ಲಿ ಅವತರಿಸುವೆನೆಂಬ (೪-೭) ತನ್ನ

ಗೀತಾವತಾರ

ಸತ್ಯಸಂಕಲ್ಪವನ್ನು ವ್ಯಕ್ತಮಾಡುತ್ತಾ, ಸತ್ಯವತೀ ಪರಾಶರರನ್ನು ನೆಪ ಮಾಡಿ, ವೇದವ್ಯಾಸ ರೂಪದಿಂದ ಅವತರಿಸಿ ಉತ್ಸನ್ನಗಳಾದ ವೇದಗಳನ್ನು ಪರಿಷ್ಕರಿಸಿ ಸಕಲ ವೇದಾರ್ಥಗಳಿಂದ ಪೂರ್ಣವಾದ ಅಷ್ಟಾದಶ ಪರ್ವಾತ್ಮಕವಾದ ಮಹಾಭಾರತವನ್ನು ರಚಿಸಿ, ಆ ಸಕಲ ವೇದಾರ್ಥ ಭಾರತಾರ್ಥ ಸಂಗ್ರಹವಾದ ಶ್ರೀಕೃಷ್ಣಾರ್ಜುನ ಸಂವಾದರೂಪ ಶ್ರೀ ಭಗವದ್ಗೀತೆಯನ್ನು ಹದಿನೆಂಟು ಅಧ್ಯಾಯವಾಗಿ ರಚಿಸಿದರು.

ಈ ಗೀತಾಶಾಸ್ತ್ರದಲ್ಲಿ ಭಗವದ್ಜ್ಞಾನಕ್ಕೆ ಸಾಧನವಾಗಿ, ಕಾಮಕ್ರೋಧಾದಿ ತ್ಯಾಗಪೂರ್ವಕ ಸ್ವಸ್ವವರ್ಣಾಶ್ರಮೋಚಿತ ಯಜ್ಞಾಧ್ಯಯನ ಶ್ರವಣ ಮನನ ಧ್ಯಾನಾದಿ ಕರ್ಮಗಳನ್ನೂ ಹೇಳುವುದಲ್ಲದೆ, ಆ ಧ್ಯಾನವು ಭಕ್ತಿಪೂ

ಗೀತಾರ್ಥ ಸಂಗ್ರಹ

ರ್ವಕವಾದರೆ ಭಗವದ್ಧ್ಯಾನ ಸಾಧನವಾಗುವುದೇ ಹೊರತು, ಕಂಸ ಶಿಶುಪಾಲಾದಿಗಳಂತೆ ದ್ವೇಷ ಪೂರ್ವಕ ಮಾಡಿದ್ದು ಜ್ಞಾನ ಸಾಧನವಾಗುವುದಿಲ್ಲವಾದ್ದರಿಂದಲೂ, ಅಂಥಾಭಕ್ತಿಯು ಭಗವನ್ಮಾಹಾತ್ಮ್ಯ ಜ್ಞಾನದಿಂದಲೇ ಉಂಟಾಗುವುದಾದ್ದರಿಂದಲೂ, ಭಗವನ್ಮಾಹಾತ್ಮ್ಯೆಯು ಇಲ್ಲಿ ಸಂಕೋಚ-ವಿಸ್ತಾರಗಳಿಂದ ಹೇಳಲ್ಪಡುತ್ತದೆ.

ಒಂದನೇ ಅಧ್ಯಾಯ ಸಮಗ್ರವೂ, ಎರಡನೇ ಅಧ್ಯಾಯದ ಹತ್ತು ಶ್ಲೋಕಗಳವರೆಗೂ, ಶ್ರೀಕೃಷ್ಣನು ಅರ್ಜುನನಿಗೆ ಗೀತೋಪದೇಶಮಾಡಲು ಉಂಟಾದ ಆವಶ್ಯಕತೆಯನ್ನು ತಿಳಿಸುವ ಕಥಾಸಂದರ್ಭವು ಹೇಳಲ್ಪಡುತ್ತದೆ.

ಸಾಕ್ಷಾತ್ ಇಂದ್ರಾವತಾರನಾದ್ದರಿಂದ ಉತ್ತಮಾಧಿಕಾರಿಯೆಂದು ಶ್ರೀಕೃಷ್ಣನ ಪ್ರೀತಿ ವಿಶೇಷಕ್ಕೆ ಪಾತ್ರನಾದ ಅರ್ಜುನನು ಮಹಾರಥಿಕರೇ ಮೊದಲಾದವರಿಂದ ನಿಬಿಡವಾಗಿ, ವ್ಯೂಹರಚನೆಯಿಂದ ನಿಂತ ಕುರುಪಾಂಡವ ಸೈನ್ಯವು, ಶಂಖವನ್ನೂದುತ್ತಾ ರಣಭೇರಿಗಳನ್ನು ಬಾರಿಸುತ್ತಾ ಯುದ್ಧಕ್ಕೆ ಸಿದ್ಧವಾಗಲು, ಉಭಯ ಸೈನ್ಯಗಳ ಮಧ್ಯದಲ್ಲಿ ನಿಂತು ನೋಡಿ-'ಪೂಜಾರ್ಹರಾದ ಈ ತಾತ ಗುರು ಮೊದಲಾದ ಬಂಧುಗಳನ್ನು ಕೊಂದು ರಾಜ್ಯವನ್ನು ಸಂಪಾದಿಸುವುದು ಅನುಚಿತ ಈ ಯುದ್ಧದಿಂದ ಕುಲಕ್ಷಯವಾಗಿ ಕುಲಧರ್ಮಗಳೂ ಜಾತಿಧರ್ಮಗಳೂ ನಷ್ಟವಾಗಿ, ಸತ್ಕುಲಗಳಲ್ಲಿ ಅಧರ್ಮ ಪ್ರಚಾರದಿಂದ ಸ್ತ್ರೀಯರು ವ್ಯಭಿಚಾರಾದಿ ದೋಷಗಳಿಗೆ ಪಾತ್ರರಾಗಿ ಕೆಡಲು ವರ್ಣಸಾಂಕರ್ಯವುಂಟಾಗಿ ಶ್ರಾದ್ಧಾದಿ ಪಿತೃಕಾರ್ಯಗಳು ನಿಂತುಹೋಗಿ ನರಕಪ್ರಾಪ್ತಿಯಾಗುವುದು. ಹಾಗೂ ಜಯನಿಶ್ಚಯವಿಲ್ಲ. ಯಾರನ್ನು ಸಂತೋಷಪಡಿಸುವುದಕ್ಕಾಗಿ ನಾವು ರಾಜ್ಯೈಶ್ವರ್ಯಗಳನ್ನು ಸಂಪಾದಿಸಬೇಕೋ ಅಂಥಾ ಬಂಧುಜನಗಳ ಮರಣಕ್ಕೆ ಕಾರಣವಾದ ರಣವನ್ನು ಮಾಡದೆ ಶತ್ರುಗಳ ಶಸ್ತ್ರಗಳಿಗೆ ಶಿರವನ್ನೊಡ್ಡಿ ಸಾಯುವುದೇ ಲೇಸು. ಗುರು ಮೊದಲಾದ ಪೂಜ್ಯರ ರಕ್ತದಿಂದ ನೆನೆಯಿಸಲ್ಪಟ್ಟ ರಾಜ್ಯಭೋಗಗಳನ್ನು ಅನುಭವಿಸುವುದ

ಗೀತೋಪೋದ್ಘಾತ

ಕ್ಕಿಂತಲೂ ಭಿಕ್ಷಾನ್ನದಿಂದ ಜೀವಿಸುವುದೇ ಮೇಲು' ಎಂದು ಹೇಳುತ್ತಾ, ಕ್ಷತ್ರಿಯರಿಗೆ ಪರಮ ಧರ್ಮವಾದ-ಭಗವದ್ವೇಷಿ ನಿಗ್ರಹರೂಪ ಯುದ್ಧವನ್ನು ಸ್ವಜನಾಭಿಮಾನದಿಂದ ಅಧರ್ಮವೆಂದು ಆಕ್ಷೇಪಿಸುತ್ತಾ, ಕೈಯಲ್ಲಿದ್ದ ಬಿಲ್ಲು ಬಾಣಗಳನ್ನು ಕೆಳಗೆ ಹಾಕಿ ಸುಮ್ಮನೆ ಕೂಡಲು, ಸಾರಥಿಯ ಸ್ಥಾನ ದಲ್ಲಿ ಕುಳಿತಿದ್ದ ಶ್ರೀಕೃಷ್ಣನು ಅರ್ಜುನನನ್ನು ಸಂಬೋಧಿಸಿ ಸಕಲ ಸಜ್ಜ ನೋದ್ಧಾರಾರ್ಥವಾಗಿ - 'ಅಯ್ಯಾ ಸಮಸ್ತವೂ ಭಗವದಧೀನವಾದ್ದರಿಂದ ಭಗವದಾಜ್ಞಾರೂಪ ಶಾಸ್ತ್ರವಿಹಿತವಾದ ತಮ್ಮ ತಮ್ಮ ವರ್ಣಾಶ್ರಮೋಚಿತ ಕರ್ಮಗಳಿಂದ ಭಕ್ತಿಪೂರ್ವಕ ಭಗವಂತನನ್ನು ಆರಾಧಿಸುವುದೇ ಪರಮ ಧರ್ಮ. ಅದಕ್ಕೆ ವಿರೋಧವಾದುದೆಲ್ಲವೂ ಅಧರ್ಮ. ಆದುದರಿಂದ ಕ್ಷತ್ರಿ ಯನಾದ ನಿನಗೆ ಧರ್ಮವಾದ ಭಗವದ್ವೇಷಿ ನಿಗ್ರಹರೂಪ ಯುದ್ಧವನ್ನು ಮಾಡಿ ಅದನ್ನು ಭಗವಂತನಿಗೆ ಅರ್ಪಿಸುವುದೇ ಮೋಕ್ಷ ಸಾಧನವಾದುದು.'

''ಎಲೈ ಅರ್ಜುನನೇ, ನೀನು ಯುದ್ಧದಲ್ಲಿ ಬಂಧುನಾಶವಾಗುವು ದೆಂದು ಶೋಕಿಸುವುದೂ ಯುಕ್ತವಲ್ಲ; ಸಕಲ ಜೀವರುಗಳೂ ಈಶ್ವರನಾದ ನನ್ನಂತೆ ಪೂರ್ವ ಪೂರ್ವದಿಂದ ಇದ್ದವರೇ! ಮುಂ

ಜೀವನಿತ್ಯ

ದೂ ಅನಂತಕಾಲ ಇರತಕ್ಕವರೇ! ಇವರಿಲ್ಲದ ಕಾ ಲವೇ ಇಲ್ಲ. ಜೀವರನ್ನು ಶಸ್ತ್ರಗಳು ಕತ್ತರಿಸಲಾ ರವು. ಬೆಂಕಿಯು ಸುಡಲಾರದು ನೀರು ನೆನೆಯಿಸಲಾರದು. ಪ್ರತಿಯೊ ಬ್ಬ ಜೀವನ ಸ್ವರೂಪವೂ ಭಗವಂತನಂತೆ ನಿತ್ಯವಾದುದು. ಯಾವ ಜೀವ ನಿಗೂ ನಾಶವಿಲ್ಲ.

''ಯುದ್ಧದಿಂದ ಬಂಧುಗಳ ದೇಹನಾಶವಾಗುವುದೆಂದು ಶೋಕಿಸುವೆ ನೆಂಬುದೂ ಯುಕ್ತವಲ್ಲ. ಜೀವರಿಗೆ ಒಂದು ಹಳೇ ದೇಹ ತಪ್ಪಿವಾಗ ಮ ತ್ತೊಂದು ಹೊಸ ದೇಹವು ಸಿದ್ಧವಾಗಿಯೇ ಇರುತ್ತದೆ. ಒಂದೇ ಜನ್ಮದಲ್ಲಿ ಯೇ ಪ್ರಾಣಿಗಳಿಗೆ ಹೇಗೆ ಬಾಲ್ಯದ ದೇಹ ಹೋಗಿ ಯೌವನ ದೇಹ ಬರು ವುದೋ, ಅದೂ ಹೋಗಿ ಮುಪ್ಪಿನದೇಹ ಬರುವುದ

ದೇಹ ನಿಯತ

ರಿಂದ. ಆ ಹಿಂದಿನ ದೇಹಗಳಿಗೆ ನಾಶವುಂಟಾಗುವು ದೆಂದು ಹೇಗೆ ಶೋಕಿಸುವುದಿಲ್ಲವೋ ಹಾಗೆಯೇ ಆ ಮುಪ್ಪಿನದೇಹ ಹೋ

ದರೆ ಪುನಃ ಬಾಲ್ಯದ ದೇಹ ಬರುವುದು ನಿಶ್ಚಯ. ಹೇಗೆ ಮನುಷ್ಯರು ಹಳೆಯದಾದ ಹರಕು ಅಂಗಿಯನ್ನು ತ್ಯಜಿಸಿ ಹೊಸ ಅಂಗಿಯನ್ನು ತೊಡುವರೋ ಅದೇ ಪ್ರಕಾರ ಜೀವರೂ ಜೀರ್ಣ ದೇಹವನ್ನು ತ್ಯಜಿಸಿ ನೂತನ ದೇಹವನ್ನು ಹೊಂದುತ್ತಾರಾದ್ದರಿಂದ ಅದಕ್ಕಾಗಿ ಶೋಕಿಸುವುದೇಕೆ? (೨-೧೩,೨೨)

ಯಾರಿಗೂ ಮರಣ ದುಃಖವು ತಪ್ಪಿದ್ದಲ್ಲ

"ಜೀವರು ನಿತ್ಯರೇ ಆದರೂ, ಅವರಿಗೆ ದೇಹಸಂಬಂಧ ದೇಹವಿಯೋಗ ರೂಪಗಳಿಂದ ಜನನ ಮರಣಗಳು ಉಂಟೇ ಉಂಟು. ಯುದ್ಧದಲ್ಲಿ ಮರಣ ನಿಯತವಾದ್ದರಿಂದ ಸ್ವಜನರಿಗೆ ದುಃಖವುಂಟಾಗುವುದೆಂದು ಶೋಕಿಸುವೆನೆಂಬುದೂ ಸರಿಯಲ್ಲ. ಹುಟ್ಟಿದವರಿಗೆ ಸಾವು ತಪ್ಪಿದ್ದಲ್ಲ. ಪ್ರತಿಯೊಬ್ಬರೂ ಯಾವುದೋ ಒಂದು ನಿಮಿತ್ತದಿಂದ ಒಂದಾನೊಂದು ದಿವಸ ಆ ಮರಣ ದುಃಖವನ್ನು ಅನುಭವಿಸಿಯೇ ತೀರಬೇಕಾದ್ದರಿಂದ ಕ್ಲುಪ್ತವಾದ ಸಂಗತಿಗೆ ವ್ಯಸನ ಪಡುವುದು ಯುಕ್ತವಲ್ಲ. (೨-೨೭)

ಅಭಿಮಾನವೇ ದುಃಖಕ್ಕೆ ಕಾರಣ

"ಯುದ್ಧದಲ್ಲಿ ನಾವು ಬಂಧುಗಳನ್ನು ಕೊಂದರೆ, ಅವರ ದರ್ಶನ ಸ್ಪರ್ಶನ ಸಂಭಾಷಣ ಮೊದಲಾದುವುಗಳಿಂದಾಗುವ ಆನಂದವು ನಮಗೆ ತಪ್ಪುವುದು. ಆಯುಧಗಳಿಂದ ಬಂಧುಗಳ ದೇಹಗಳು ತುಂಡು ತುಂಡಾದದ್ದನ್ನು ಕಂಡರೆ ನಮಗೆ ದುಃಖವಾಗುವುದಾಗಿ ಯುದ್ಧ ಮಾಡಬಾರದೆಂದು ಹೇಳುವುದೂ ಸರಿಯಲ್ಲ.

"ಕೇವಲ ಬಂಧುಗಳ ದರ್ಶನಾದಿಗಳು ಮಾತ್ರವೇ ಸುಖಕ್ಕೆ ಕಾರಣವಲ್ಲ. ಕೇವಲ ಬಂಧು ಮರಣವೂ ದುಃಖ ಕಾರಣವಲ್ಲ. ಪರಂತು ಬಂಧುಗಳಲ್ಲಿ ನಮಗಿರುವ ಅಭಿಮಾನವೇ ಸುಖ ದುಃಖಗಳಿಗೆ ಕಾರಣವೆಂದು ತಿಳಿಯಬೇಕು.

**ಉದಾಹರಣೆ**:—ಒಬ್ಬನು ಸಾವಿರಾರು ರೂಪಾಯಿಗಳ ಕ್ರಯಕೊಟ್ಟು ಒಂದು ಕುದುರೆಯನ್ನು ಕೊಂಡು, ಅದರ ನಡಿಗೆಯನ್ನು ನೋಡಿ ಆನಂದಪಡುವನು. ಅದಕ್ಕೆ ದಣಿವಾಗುವುದೆಂದು ಹತ್ತಲು ತನ್ನ ಮಿತ್ರರಿಗೂ

ಅವಕಾಶಕೊಡನು. ಅದಕ್ಕೆ ಏನಾದರೂ ರೋಗ ಬಂದರೆ ತನ್ನ ದೇಹಕ್ಕೆ ಬಾಧೆಯಾದಂತೆ ಕೊರಗುವನು. ಆದರೆ ಇಂಥಾ ಕುದುರೆಯನ್ನು ಸಹ ಗಿರಾಕಿ ಬಂದಿತೆಂದರೆ ಐನೂರು ರೂಪಾಯಿಗಳ ಲಾಭಕ್ಕೆ ಮಾರುವನು. ಆ ಕ್ಷಣವೇ ಇನ್ನೂ ತನ್ನ ಲಾಯದಲ್ಲೇ ಕಟ್ಟಲ್ಪಟ್ಟಿರುವ ಆ ಕುದುರೆಗೆ ಏನಾದರೂ ಅಪಾಯವುಂಟಾದರೆ ಅವನಿಗೆ ಮೊದಲಿನಂತೆ ದುಃಖವಾಗಲಾರದು. ಅದು ಇನ್ನೂ ಪುಷ್ಟಾಂಗವಾಗಿ ಬೆಳೆದರೆ ಅದರಿಂದ ಆನಂದವೂ ಉಂಟಾಗದು. ಈ ಕುದುರೆಯು ನಿಮಿತ್ತವಾದ ಸುಖ ದುಃಖಗಳಿಗೆ 'ಕುದುರೆ ನನ್ನದು' ಎಂಬ ಅಭಿಮಾನವೇ ಹೇಗೆ ಕಾರಣವೋ, ಮಾರಿದಮೇಲೆ ಅದರಿಂದ ಸುಖ ದುಃಖಗಳುಂಟಾಗದೆ ಇರುವುದಕ್ಕೆ ಅದರಲ್ಲಿ ಅಭಿಮಾನ ತಪ್ಪಿದ್ದೇ ಹೇಗೆ ಕಾರಣವೋ, ಹಾಗೆ ಬಂಧುಗಳಲ್ಲಿ ನಮಗಿರುವ ಅಭಿಮಾನವೇ ಅವರ ಮರಣದಿಂದಾಗುವ ದುಃಖಕ್ಕೂ-ಅವರ ದರ್ಶನಾದಿಗಳಿಂದ ಉಂಟಾಗುವ ಸುಖಕ್ಕೂ ಕಾರಣವೆಂದು ತಿಳಿದು, ಅಭಿಮಾನವನ್ನು ತ್ಯಜಿಸಿದರೆ ಬಂಧು ಮರಣದಿಂದ ದುಃಖವಾಗುವುದಿಲ್ಲವಾಗಿ, ಕ್ಷತ್ರಿಯರೇ ಮುಂತಾದವರು ಅಭಿಮಾನವನ್ನು ತ್ಯಜಿಸಿ ಸ್ವಧರ್ಮವಾದ ಯುದ್ಧ ಮೊದಲಾದ ಕರ್ಮಗಳನ್ನು ಮಾಡಲೇಬೇಕು.

"ಯುದ್ಧದಲ್ಲಿ ಬಂಧುಗಳನ್ನು ಕೊಂದು ಅದರಿಂದ ಉಂಟಾಗುವ ದುಃಖವನ್ನು ಅಭಿಮಾನ ತ್ಯಾಗದಿಂದ ಹೋಗಲಾಡಿಸಬೇಕೆಂಬುದು-'ಕೆಸರು ತುಳಿದು ಕಾಲು ತೊಳೆದ' ಎಂಬ ಗಾಥೆಯಂತಾಗುವುದು. ಬಂಧುಗಳನ್ನು ಕೊಲ್ಲಬೇಕೇಕೆ? ಆ ದುಃಖ ಪರಿಹಾರಕ್ಕಾಗಿ ಅಭಿಮಾನ ತ್ಯಾಗವೇಕೆ? ಯುದ್ಧಕ್ಕೇ ಇಳಿಯದಿದ್ದರೆ ಆ ದುಃಖ ಹುಟ್ಟುವ ಪ್ರಸಕ್ತಿಯೇ ಇಲ್ಲ ಆದುದರಿಂದ ಯುದ್ಧವನ್ನು ಮಾಡಲಾರೆನು' ಎಂಬ ನಿನ್ನ ಆಕ್ಷೇಪವೂ ಸರಿಯಲ್ಲ.

ಸ್ವಧರ್ಮಾನುಷ್ಠಾನ ಆವಶ್ಯಕ

"ಇತರ ಜಾತಿಯ ಧರ್ಮಗಳನ್ನು ಸಾಂಗವಾಗಿ ಆಚರಿಸುವುದಕ್ಕಿಂತ, ತನ್ನ ಜಾತಿಯ ಧರ್ಮವನ್ನು ಅಂಗಹೀನವಾಗಿಯಾದರೂ ಆಚರಿಸುವುದೇ ಮೇಲು. ಸ್ವಧರ್ಮವಾದ ಯುದ್ಧಾದಿಗಳಲ್ಲಿ ಸತ್ತರೂ ಸಹ ಅದೇ ಶ್ರೇಷ್ಠ.

ಇತರ ವರ್ಣಗಳವರ ಧರ್ಮವು ನಿಷಿದ್ಧವಾದುದರಿಂದ, ಅದು ನರಕಾದ್ಯನರ್ಥಕ್ಕೆ ಕಾರಣವಾಗುವುದು (೩-೩೫ ; ೧೮-೪೭)

"ಕ್ಷತ್ರಿಯರಿಗೆ ಯುದ್ಧವೇ ಭಗವತ್ಪೂಜಾ ರೂಪವಾದ್ದರಿಂದ ಅದಕ್ಕಿಂತಲೂ ಶ್ರೇಷ್ಠವಾದ ಧರ್ಮವು ಬೇರೆ ಇಲ್ಲ (೨-೩೧). ತಮ್ಮ ತಮ್ಮ ವರ್ಣಧರ್ಮಗಳನ್ನೂ ಆಶ್ರಮ ಧರ್ಮಗಳನ್ನೂ ಆಚರಿಸುತ್ತಾ ಭಗವಂತನನ್ನು ಆರಾಧಿಸುವವರಿಗೆ ಮೋಕ್ಷ ಲಭಿಸುವುದು. ಆದ್ದರಿಂದ ತಮ್ಮ ಜಾತಿ ಧರ್ಮಗಳನ್ನು ಬಿಡದೆ ಅಭಿಮಾನವನ್ನು ಬಿಟ್ಟು, ಸುಖಕಾರಣ ಒದಗಿದಾಗ ಹಿಗ್ಗದೆ, ದುಃಖಕಾರಣ ಒದಗಿದಾಗ ಕುಗ್ಗದೆ, ಇರತಕ್ಕ ಧೀರನೇ ಬ್ರಹ್ಮಜ್ಞಾನ ಹೊಂದಿ ಮುಕ್ತಿಗೆ ಅರ್ಹನಾಗುವನು (೨-೧೫). ಆದ್ದರಿಂದ ಕ್ಷತ್ರಿಯರು ಯುದ್ಧವನ್ನು ತ್ಯಜಿಸುವುದು ಧರ್ಮವಲ್ಲ.

"ಹಿಂಸಾಕರ್ಮವು ನಿಷಿದ್ಧವೆಂದು ಸಕಲ ಶಾಸ್ತ್ರಗಳೂ ಸಾರುತ್ತಿರುವುದರಿಂದ ಪ್ರಾಣಿಹಿಂಸೆಯಿಲ್ಲದೆ ಕೊನೆಗಾಣದ ಯುದ್ಧಾದಿಗಳಿಂದ ಕ್ಷತ್ರಿಯಾದಿಗಳಿಗೆ ಪ್ರತ್ಯವಾಯವುಂಟಾಗಿ ನರಕಾದ್ಯನರ್ಥಕ್ಕೆ ಕಾರಣವಾಗುವುದೆಂಬ ಆಕ್ಷೇಪಣೆಗೂ ಅವಕಾಶವಿಲ್ಲ.

**ಶಾಸ್ತ್ರದಲ್ಲಿ ಹೇಳಿದ್ದೇ ಧರ್ಮ**

"ಹೇಗೆ ಶಾಸ್ತ್ರ ನಿಷಿದ್ಧವಾದ ಸುರಾಪಾನ ಮೊದಲಾದುವುಗಳಿಂದ ಪುಣ್ಯವೂ ಸ್ವರ್ಗಾದಿ ಸುಖವೂ ಇಲ್ಲವೋ ಹಾಗೆಯೇ ಭಗವದಾಜ್ಞಾರೂಪವಾದ ಶ್ರುತಿ ಸ್ಮೃತಿಗಳಲ್ಲಿ ವಿಧಿಸಲ್ಪಟ್ಟ ಯುದ್ಧಾದಿ ಪ್ರಶಸ್ತ ಕ್ರಿಯೆಗಳಿಂದ ಪಾಪ ಬರುವುದಿಲ್ಲವಾದ್ದರಿಂದ ನರಕಕ್ಕೆ ಪ್ರಸಕ್ತಿಯೇ ಇಲ್ಲ.

"ಕರ್ಮವು ಸಂಸಾರ ಬಂಧಕ್ಕೆ ಕಾರಣವಾದದ್ದು. ಬ್ರಹ್ಮಜ್ಞಾನವೇ ಸಂಸಾರ ಬಂಧಮೋಚಕವೆಂದು ಶಾಸ್ತ್ರವೇ ಹೇಳುತ್ತಿರುವುದರಿಂದ ಯುದ್ಧಾದಿ ಕರ್ಮ ನಿಷಿದ್ಧವೆಂತಲೂ ಹೇಳಬಾರದು.

**ಕಾಮ್ಯ-ಅಕಾಮ್ಯ ಕರ್ಮಗಳು**

'ಸಾಂಸಾರಿಕ ಸುಖಸಾಧನೆಗಾಗಿ ಮಾಡುವ, ಯಜ್ಞ-ಯುದ್ಧಾದಿ ಕರ್ಮಗಳೇ ಕಾಮ್ಯ ಕರ್ಮಗಳೆಂಬವು. ಅಂಥಾ ಕಾಮ್ಯ ಕರ್ಮಗಳು ಬಂಧಕವಾದುವು. ಸಂತಾನ ಸೌಭಾ

ಗ್ಯ ರಾಜೈಶ್ವರ್ಯಾದಿ ಐಹಿಕ ಫಲಾಸೆಯನ್ನೂ ಸ್ವರ್ಗಾದಿ ನಶ್ವರವಾದ ಪಾರತ್ರಿಕ ಫಲಾಸೆಯನ್ನೂ ತೊರೆದು, ಭಗವಂತನ ಪ್ರೀತಿಯನ್ನೇ ಉದ್ದೇಶಿಸಿ ಮಾಡುವ ಅವೇ ಯಜ್ಞ ಯುದ್ಧಾದಿಗಳೇ ಭಗವತ್ಪೂಜಾ ರೂಪವಾಗಿ ಬ್ರಹ್ಮಜ್ಞಾನೋತ್ಪತ್ತಿಗೆ ಕಾರಣವಾಗಿ ಮೋಕ್ಷ ಸಾಧನವಾಗುವುದರಿಂದ ಬಂಧಕವಾಗಲಾರವು.

'ಆಚತುರ್ದಶ ಮಾದ್ವರ್ಷಾತ್ಕರ್ಮಾಣಿ ನಿಯಮೇನತು
ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಂ
ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ'

**ಕರ್ಮಕ್ಷಯವಾಗುವ ಬಗೆ**

'ಮನುಷ್ಯರು ಹದಿನಾಲ್ಕನೆಯ ವರ್ಷ ಮೊದಲ್ಗೊಂಡು ಸಾಯುವವರೆಗೂ ಪ್ರತಿದಿನವೂ, ಹತ್ತಕ್ಕೆ ಕಡಮೆಯಿಲ್ಲದೆ ಜನ್ಮಗಳು ಉಂಟಾಗತಕ್ಕಷ್ಟು ಕರ್ಮಗಳನ್ನು ತಪ್ಪದೆ ಮಾಡುತ್ತಾರೆ. ಒಬ್ಬನು ಐವತ್ತು ವರ್ಷ ಬದುಕಿದರೆ, ಅವನು ಒಂದು ಲಕ್ಷ ಇಪ್ಪತ್ತೊಂಭತ್ತು ಸಾವಿರದ ಆರುನೂರುಗಳಿಗಿಂತಲೂ ಹೆಚ್ಚಾದ ಜನ್ಮಗಳುಂಟಾಗುವುದಕ್ಕೆ ಕಾರಣವಾದ ಕರ್ಮಗಳನ್ನು ಮಾಡುವನಾಗುತ್ತಾನೆ. ಮುಂದಿನ ಜನ್ಮಗಳಲ್ಲಿಯೂ ಇದೇ ಪ್ರಕಾರ ಬೆಳೆಯುತ್ತಾ ಅನಂತ ಜನ್ಮಗಳುಂಟಾಗತಕ್ಕ ಕರ್ಮಗಳು ರಾಸಿರಾಸಿಯಾಗುವುದರಿಂದ ಆ ಕರ್ಮ ಫಲಗಳನ್ನು ಉಂಡು ಕರ್ಮಗಳನ್ನೆಲ್ಲಾ ಕಳೆದುಕೊಳ್ಳುವುದೇ ದುರ್ಘಟವಾಗಿ ಮುಕ್ತಿಯು ದುರ್ಲಭವಾಗುವುದಾದ್ದರಿಂದ ವರ್ಣಾಶ್ರಮ ಧರ್ಮಗಳನ್ನು ಮಾಡುವುದು ನಿಷ್ಪ್ರಯೋಜನ'ವೆಂಬ ಆಕ್ಷೇಪಣೆಗೂ ಅವಕಾಶವಿಲ್ಲ.

''ಅಗ್ನಿಜ್ವಾಲೆಯು ಕಟ್ಟಿಗೆಯ ರಾಸಿಯನ್ನು ಬೂದಿಮಾಡುವಂತೆ ಈಶ್ವರಾಪರೋಕ್ಷಜ್ಞಾನವು ಮೋಕ್ಷದಲ್ಲಿ ಸುಖಾಭಿವ್ಯಕ್ತಿಗೆ ಕಾರಣವಾದ ಪುಣ್ಯವನ್ನೂ ಅನುಭವಕ್ಕೆ ಆರಂಭಿಸಲ್ಪಟ್ಟ ಪುಣ್ಯವನ್ನೂ ಬಿಟ್ಟು, ಇತರ ಪುಣ್ಯರಾಸಿಯನ್ನೂ ಭೋಗಕ್ಕೆ ಪ್ರಾರಂಭವಾಗದ ಪಾಪರಾಸಿಯನ್ನೂ ಸುಟ್ಟು ಬೂದಿಮಾಡುತ್ತದೆ (೪-೩೭). ಅಪರೋಕ್ಷ ಜ್ಞಾನವಾದಮೇಲೆ ಪ್ರಾರಬ್ಧ ಕರ್ಮ ಭೋಗಕಾಲದಲ್ಲಿ ಮಾಡಲ್ಪಟ್ಟ ಕರ್ಮಗಳು ನೀರು ತಾವರೆ ಎಲೆಗೆ

ಅಂಟದಂತೆ ಅಪರೋಕ್ಷ ಜ್ಞಾನಿಗೆ ಅಂಟುವುದಿಲ್ಲ. (೨-೫೦) ಎಂದರೆ ಅನಿಷ್ಟ ಫಲವನ್ನುಂಟುಮಾಡುವುದಿಲ್ಲ. ಹೀಗೆ ಹಿಂದಿನ ಕರ್ಮ ನಷ್ಟವಾಗಿ ಮುಂದಿನ ಕರ್ಮಕ್ಕೆ ಲೇಪವಿಲ್ಲದೆ, ಅಪರೋಕ್ಷಜ್ಞಾನ ಮಹಿಮೆಯಿಂದ ಮೋಕ್ಷವಾಗುತ್ತದೆ.

"ಸರ್ವವೂ ಭಗವದಧೀನವಾದ್ದರಿಂದಲೂ, ಭಗವಂತನೇ ಸರ್ವ ಕರ್ತನಾದುದರಿಂದಲೂ, ಜೀವರಿಗೆ ಯಾವ ಕರ್ಮದಲ್ಲಿಯೂ ಸ್ವಾತಂತ್ರ್ಯವಿಲ್ಲವಾಗಿ ಅವರನ್ನು ಕರ್ಮಫಲಾನುಭವಕ್ಕೆ ಗುರಿಮಾಡುವುದು ಸರಿಯಲ್ಲ" ವೆಂಬ ಆಕ್ಷೇಪಣೆಗೂ ಅವಕಾಶವಿಲ್ಲ.

ಜೀವನಿಗೆ ಕರ್ತೃತ್ವ

"ಪ್ರಪಂಚದಲ್ಲಿ ರಾಜಕೀಯ ಕಾರ್ಯ ಮೊದಲಾದವುಗಳನ್ನು ಹೇಗೆ ಪಂಚಾಯಿತರನ್ನು ಕೂಡಿಸಿ ನಡೆಸುತ್ತಾರೆಯೋ, ಮತ್ತು ಹೇಗೆ ಅದರಲ್ಲಿ ಸೇರಿದ ಪ್ರತಿಯೊಬ್ಬನಿಗೂ, ಕಾರ್ಯ ವ್ಯವಸ್ಥಾಪಕತ್ವ ಸಾಮರ್ಥ್ಯವಿದೆಯೋ, ಪ್ರತ್ಯೇಕಿಸಿ ನೋಡಿದರೆ ಹೇಗೆ ಯಾವನೊಬ್ಬನಿಗೂ ಸ್ವತಂತ್ರಾಧಿಕಾರವಿಲ್ಲವೋ ಅಲ್ಲದೆ ಒಬ್ಬನು ಪ್ರಸ್ತಾಪಿಸಿದ್ದನ್ನು ಇತರ ನಾಲ್ವರೂ ಒಪ್ಪದಿದ್ದ ಭಾಗದಲ್ಲ ಕಾರ್ಯವು ಹೇಗೆ ನಿರ್ವಾಹವಾಗಲಾರದೋ, ಅದರಂತೆಯೇ ಲೋಕದಲ್ಲಿ ಪ್ರತಿಯೊಂದು ಕಾರ್ಯಕ್ಕೂ, ಜೀವ, ಈಶ್ವರ ಮೊದಲಾದ ಐದು ಕಾರಣಗಳುಂಟು. ಈ ಪೈಕಿ ಜೀವನು ಒಂದು ಕಾರ್ಯಕ್ಕೆ ಪ್ರಯತ್ನಪಟ್ಟಲ್ಲಿ, ಇತರ ನಾಲ್ವರೂ ಅನುಕೂಲವಾದ ಹೊರತು, ಆ ಕಾರ್ಯವು ನೆರವೇರಲಾರದು. ಆದ್ದರಿಂದ ಪ್ರತಿಯೊಂದು ಕೆಲಸದಲ್ಲಿಯೂ ಜೀವನಿಗೆ ಐದರಲ್ಲಿ ಒಂದು ಪಾಲು ಅಧಿಕಾರವು (ಕರ್ತೃತ್ವ) ಉಂಟೇ ಉಂಟು (೧೮-೧೪). ಮನುಷ್ಯರು ಶರೀರ ವಾಕ್ಕು ಮತ್ತು ಮನಸ್ಸುಗಳಿಂದ ಮಾಡತಕ್ಕ ಒಳ್ಳೆಯ ಕಾರ್ಯಕ್ಕಾಗಲೀ, ಕೆಟ್ಟ ಕಾರ್ಯಕ್ಕಾಗಲೀ ಈ ಐದು ಕಾರಣಗಳೂ ಇರುವಾಗ ಯಾವ ಪುರುಷನು ಒಂದಾನೊಂದು ಕಾರ್ಯಕ್ಕೆ ತಾನೇ ಸ್ವತಂತ್ರ ಕರ್ತನೆಂದು ಭಾವಿಸುತ್ತಾನೋ ಅವನು ನಿಜಸ್ಥಿತಿಯನ್ನು ತಿಳಿಯದ ಮೂರ್ಖನು. ಅಲ್ಲದೆ ಜಡಪದಾರ್ಥಗಳಿಗೆ ಕರ್ಮಾಧಿಕಾರವು ಅನುಭವ ವಿರುದ್ಧ. ಕರ್ಮ ಲೇಪವಿಲ್ಲದ ಈಶ್ವರನಿಗೆ ಕರ್ಮಾಧಿಕಾರ ಹೇಳುವುದು ಅಸಂಗತ. ಉಳಿದ ಜೀವರಿಗೂ

ಕರ್ಮ ಕರ್ತೃತ್ವ ಹೇಳದೇ ಹೋದರೆ,-'ಸಂಧ್ಯಾವಂದನ ಮಾಡಬೇಕು; ಮದ್ಯಪಾನ ಮಾಡಬಾರದು'' ಈ ಮೊದಲಾದ ವೇದೋಕ್ತವಿಧಿ ನಿಷೇಧಗಳು ವ್ಯರ್ಥವಾಗುವ್ರವು. ಆದ್ದರಿಂದ ಜೀವರಿಗೆ ಪರಾಧೀನ ಕರ್ತೃತ್ವವಿರುವ್ರದರಿಂದಲೂ, ಆ ಕರ್ಮಫಲಕ್ಕೆ ಅವರು ಭಾಗಿಗಳಾಗುವ್ರದು ಯುಕ್ತವಾದುದರಿಂದಲೂ ಸ್ವವರ್ಣಾಶ್ರಮೋಚಿತ ಕರ್ಮಗಳನ್ನು ಮಾಡಲೇಬೇಕು.

'ಜ್ಞಾನದಿಂದಾಗುವ ಶಾಶ್ವತ ಫಲಕ್ಕಿಂತಲೂ, ಯಜ್ಞಾದಿ ಕರ್ಮಾನುಷ್ಠಾನದಿಂದ ಆಗುವ ಸ್ವರ್ಗಾದಿ ನಶ್ವರಫಲವು, ಅತಿ ಕೀಳಾದದ್ದೆಂದು (೨-೪೯) ಹಿಂದೆ ಹೇಳಿರುವುದರಿಂದ, ಸಂಸಾರಾರಣ್ಯ ಬೆಳೆಯುವುದಕ್ಕೆ ಬೀಜದಂತಿರುವ ಸಮಸ್ತ ಕರ್ಮಗಳನ್ನೂ ತ್ಯಜಿಸಿ ಜ್ಞಾನ ಮಾರ್ಗವನ್ನವಲಂಬಿಸುವುದೇ ಶ್ರೇಷ್ಠವಾಗಿರುವಲ್ಲಿ, ಅದರೊಳಗೂ ಕಾಮಕ್ರೋಧಾದಿ ಮೂಲಕ ಘೋರವಾದ ಯುದ್ಧಾಖ್ಯ ಕರ್ಮವು ಮತ್ತಷ್ಟು ಕೀಳಾದ್ದರಿಂದ ಸ್ವವರ್ಣಾಶ್ರಮೋಚಿತ ಕರ್ಮಗಳನ್ನು ಮಾಡಲೇ ಬೇಕೆಂಬುದು ಅನುಚಿತ. ಆದ್ದರಿಂದ ಮೋಕ್ಷಾಪೇಕ್ಷಿಗಳು ಕರ್ಮಮಾಡಬಾರದು'ಎಂಬ ಆಕ್ಷೇಪಣೆಗೂ ಅವಕಾಶವಿಲ್ಲ.

**ಕರ್ಮತ್ಯಾಗ ನಿಷೇಧ**

''ಯದ್ಯಪಿ ಬ್ರಹ್ಮಜ್ಞಾನದಿಂದಲೇ ಮೋಕ್ಷವೆಂಬುದು ಶಾಸ್ತ್ರಾರ್ಥ. ಆದರೂ ವಿಹಿತ ಕರ್ಮಗಳನ್ನು ಬಿಡಲಾಗದು ಏಕೆಂದರೆ:—ನಿವೃತ್ತ ಕರ್ಮಗಳಿಂದ ಪರಿಶುದ್ಧವಾದ ಮನಸ್ಸಿನಿಂದ ಕಣ್ಣು ಕಿವಿ ಮೊದಲಾದ ಇಂದ್ರಿಯಗಳನ್ನು ದುರ್ವಿಷಯಗಳಲ್ಲಿ ಹೋಗದಂತೆ ನಿರ್ಬಂಧ ಮಾಡಿದವನೇ ಬ್ರಹ್ಮಜ್ಞಾನಕ್ಕೆ ಅರ್ಹನಾಗುತ್ತಾನೆ. (೩-೭)

''ಆದಿಯಲ್ಲಿ ಬ್ರಹ್ಮನು, ಯಜ್ಞಯುದ್ಧ ಮೊದಲಾದ ವರ್ಣಾಶ್ರಮೋಚಿತ ಕರ್ಮಗಳೊಂದಿಗೆ ಬ್ರಾಹ್ಮಣ ಕ್ಷತ್ರಿಯಾದಿ ಜಾತಿಗಳನ್ನು ಸೃಷ್ಟಿಸಿ ಹೇಳಿದನು—'ಹೇ ಪ್ರಜೆಗಳಿರಾ, ಈ ಯುದ್ಧಾದಿ ಕರ್ಮಗಳು ನಿಮಗೆ ಕಾಮಧೇನುವಾಗಿವೆ. ಇದರಿಂದ ನೀವು ಬೇಕಾದುದನ್ನು ಪಡೆದುಬಹುದು. (೩-೧೦) ಹೇಗೆಂದರೆ, ಯಜ್ಞದಲ್ಲಿ ಹವಿಸ್ಸನ್ನು ಕೊಟ್ಟು, ನೀವು ದೇವತೆಗಳನ್ನು ಮರ್ಯಾದಿಸಿರಿ. ಅವರು ನಿಮಗೆ ಬೇಕಾದ್ದನ್ನು ಕೊಡುತ್ತಾರೆ. ಅವರು ಕೊ

ಟ್ಟಿದ್ದನ್ನು ಅವರಿಗೆ ಅರ್ಪಿಸಿಯೇ ಭುಜಿಸಿರಿ ಹಾಗೆ ಮಾಡದಿದ್ದರೆ, ಪರರ ಸ್ವತ್ತನ್ನು ಕದ್ದುದರಿಂದ ಕಳ್ಳರಾಗುವಿರಿ (೩-೧೧, ೧೨) ಯಜ್ಞಾದಿಗಳಲ್ಲಿ ದೇವತೆಗಳಿಗೆ ಅರ್ಪಿಸಿದ ಶೇಷವನ್ನು ಭುಜಿಸುವುದರಿಂದ ಪಾಪ ಪರಿಹಾರವಾಗುವುದು. (೩-೧೩) ದೇವ ಬ್ರಾಹ್ಮಣಾದಿಗಳನ್ನು ಮರೆತು ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುವ ಉದ್ದೇಶದಿಂದಲೇ ಅಡಿಗೆ ಮಾಡಿಸುವವರು, ಊಟಮಾಡುವುದು ಅನ್ನವಲ್ಲ-ಪಾಪರಾಶಿ ಎಂದು ತಿಳಿಯಬೇಕು. (೩-೧೩)

"ಭಗವಂತನ ಸಂಗತಿಯನ್ನು ವೇದದಿಂದ ಯಥಾರ್ಥವಾಗಿ ತಿಳಿದರೆ, ಆತನು ಸತ್ಕರ್ಮಗಳಲ್ಲಿ ಪ್ರೇರಿಸುತ್ತಾನೆ. ಅದರಿಂದ ಯಜ್ಞಾದಿಗಳು ನಡೆಯುತ್ತವೆ. ಅದರಿಂದ ತೃಪ್ತರಾದ ದೇವತೆಗಳು ಮಳೆಯನ್ನು ಬರಿಸುತ್ತಾರೆ. ಅದರಿಂದ ಪುನಃ ಪ್ರಾಣಿಗಳು ಹುಟ್ಟುತ್ತಾರೆ. ಅದರಿಂದ ಆಹಾರ ಪದಾರ್ಥಗಳು ದೊರೆಯುತ್ತವೆ. ಪ್ರಾಣಿಗಳಿಂದ ವೇದ ವ್ಯಕ್ತನಾಗುತ್ತದೆ. ವೇದದಿಂದ ಬ್ರಹ್ಮ ವ್ಯಕ್ತನಾಗುತ್ತಾನೆ. ವ್ಯಕ್ತವಾದ ಬ್ರಹ್ಮನಿಂದ ಕರ್ಮ ಹುಟ್ಟುತ್ತದೆ. ಈ ಧರ್ಮಚಕ್ರವನ್ನು ಕೆಡಿಸಿದ ಪಾಪಿಗಳು ಬದುಕಿಯೂ ವ್ಯರ್ಥವೇ! (೩-೧೪, ೧೬).

'ಕರ್ಮಣಾ ಬಧ್ಯತೆ ಜಂತುರ್ವಿದ್ಯಯಾಚ ವಿಮುಚ್ಯತೆ' ಎಂಬ ಸ್ಮೃತಿ ವಚನಕ್ಕೆ ಅಶಾಶ್ವತ ಫಲಕ್ಕೆ ಕಾರಣವಾದ ಕರ್ಮಬಂಧಕವೆಂದು ಸಂಕೋಚ ಮಾಡಿಯೇ ಅರ್ಥಹೇಳಬೇಕು. ಹಾಗಿಲ್ಲದೆ, ಸಕಲ ಕರ್ಮಗಳೂ ಬಂಧಕವಾದ್ದರಿಂದ ಯಾವ ಕರ್ಮವನ್ನೂ ಮಾಡಬಾರದೆಂಬ ತಾತ್ಪರ್ಯ ಹೇಳಿದರೆ

**ಸರ್ವಕರ್ಮ ತ್ಯಾಗ ಸಾಧ್ಯವಲ್ಲ**

ಸ್ನಾನಪಾನ ಭೋಜನಾದಿ ಕರ್ಮಗಳನ್ನೂ ತ್ಯಜಿಸಬೇಕಾಗಿ ಬದುಕುವುದೇ ಕಷ್ಟವಾಗುವುದು. (೩-೮) ಮತ್ತು ಎಲ್ಲಾ ಕರ್ಮಗಳನ್ನೂ ತ್ಯಜಿಸುವುದೆಂಬುದೂ ಅಶಕ್ಯವಾದದ್ದು. ಯಾವುದೊಂದು ಪ್ರಾಣಿಯೂ ಒಂದು ಕ್ಷಣವಾದರೂ ಯಾವ ವಿಧವಾದ ಕರ್ಮ (ಕೆಲಸ) ವನ್ನೂ ಮಾಡದೆ ಸುಮ್ಮನಿರುವುದು ಸಾಧ್ಯವಲ್ಲ. ಮಲಗಿದವನಿಗೆ ಶ್ವಾಸೋಚ್ಛ್ವಾಸ ಮಾಡುವುದೇ ಕರ್ಮ. ಸುಮ್ಮನೆ ಕೂತವನಿಗೆ ಬೀಳದಂತೆ ಕೂತಿರಲು ಪ್ರಯತ್ನ ಮಾಡುತ್ತಿರುವುದೇ

ಒಂದು ಕರ್ಮ (೩-೫). ಆದ್ದರಿಂದ ಮೇಲಿನ ಸ್ಮೃತಿವಚನಕ್ಕೆ ಎಲ್ಲಾ ಕರ್ಮವೆಂದು ಹೇಳಬಾರದು.

"ನಾಶಕ್ಯೇ ಶಾಸ್ತ್ರ ಚೋದನಾ"

ಎಂಬ ವಚನಾನುಸಾರ-ಶ್ವಾಸೋಚ್ಛ್ವಾಸ ಸ್ನಾನಪಾನಾದಿ ಕರ್ಮಗಳನ್ನು ಬಿಟ್ಟು ಬದುಕುವುದು ದುಸ್ತರವಾದುದರಿಂದ ಕರ್ಮಗಳನ್ನು ಬಿಡಬೇಕೆಂಬುದಕ್ಕೆ ಯಜ್ಞ ಯುದ್ಧಾದಿ ಪುಣ್ಯ ಪಾಪ ಕರ್ಮಗಳನ್ನು ಬಿಡಬೇಕೆಂದು ಅರ್ಥ ಹೇಳುವುದು ಸರಿಯಲ್ಲ ಕೈಕಾಲು ಮೊದಲಾದುವುಗಳನ್ನು ಕದಲಿಸದೆ ಕಣ್ಣು ಮುಚ್ಚಿಕೊಂಡು ಸುಮ್ಮನೆ ಕುಳಿತವನು ಸಹ ಮನಸ್ಸಿನಿಂದ ನಾನಾ ವಿಧ ಪುಣ್ಯ ಪಾಪ ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ. ಆದ್ದರಿಂದ ನಾನು ಸುಮ್ಮನೆ ಕೂತಿದ್ದೇನೆ. ಯಾವ ಕರ್ಮವನ್ನೂ ಮಾಡುವುದಿಲ್ಲವೆಂದು ಹೇಳುವ ಮೂರ್ಖನನ್ನು ಮೋಸಗಾರನೆಂದು ಹೇಳಬೇಕು (೩-೬). ಆದ್ದರಿಂದ ಮೇಲಿನ ಸ್ಮೃತಿವಚನಕ್ಕೆ ಎಲ್ಲಾ ಕರ್ಮಗಳನ್ನೂ ಬಿಡಬೇಕೆಂಬ ತಾತ್ಪರ್ಯವನ್ನು ಹೇಳದೆ, ನಿಷಿದ್ಧ ಕರ್ಮಗಳನ್ನೂ ನಶ್ವರ ಫಲಕ ಕರ್ಮಗಳನ್ನೂ ಬಿಡಬೇಕೆಂಬ ಅರ್ಥವನ್ನು ಹೇಳಬೇಕು.

ಬ್ರಹ್ಮಜ್ಞಾನಿಗಳಾದ ಜನಕ ಪ್ರಿಯವ್ರತಾದಿಗಳೂ ಸಹ ಕರ್ಮಗಳನ್ನು ಮಾಡಿಯೇ ಸಂಸಿದ್ಧಿ (= ಸಂಪೂರ್ಣ ಮೋಕ್ಷ) ಅಂದರೆ ಮುಕ್ತಿಯಲ್ಲಿ ಆನಂದಾತಿಶಯವನ್ನು ಹೊಂದಿರುತ್ತಾರೆ. ಮತ್ತು ಶಿಷ್ಟರು ಸತ್ಕರ್ಮ ಮಾಡುವುದರಿಂದ ಅದನ್ನು ನೋಡುವ ಅಜ್ಞಾನಿಗಳಿಗೂ ಕರ್ಮ ಮಾಡುವುದರಲ್ಲಿ ಆದರವುಂಟಾಗಿ ಅದರಿಂದ ಮುಕ್ತಿಹೇತುವಾದ ಈಶ್ವರ ಪ್ರೀತಿಯೂ ಉಂಟಾಗುತ್ತದೆ. ಆದ್ದರಿಂದ ಸತ್ಕರ್ಮಗಳನ್ನು ಆಚರಿಸಬೇಕು (೩-೨೦).—'ಎಲೈ ಪಾರ್ಥನೆ, ದೊಡ್ಡವರು ಮಾಡಿದ್ದೇ ಪ್ರಮಾಣಿಕವೆಂದು ಇತರರು ನಂಬಿ ಅದನ್ನು ಅನುಸರಿಸುತ್ತಾರಾದ್ದರಿಂದ ಲೋಕಶಿಕ್ಷೆಗಾಗಿ ನಾನೂ ಬ್ರಾಹ್ಮಣ ಪೂಜಾ ಯಜ್ಞ ಮೊದಲಾದ ಕರ್ಮಗಳನ್ನು ಮಾಡುತ್ತಲೇ ಇದ್ದೇನೆ. ನಾನು ಸದಾ ಪೂರ್ಣನಾದ್ದರಿಂದ ಕರ್ಮಗಳನ್ನು ಮಾಡಿ ಹೊಸದಾಗಿ ಸಂಪಾದಿಸ

ಕರ್ಮಾನುಷ್ಠಾನಕ್ಕೆ ಪೂರ್ವಿಕರ ಸಮ್ಮತಿ

ತಕ್ಕದ್ದು ಹದಿನಾಲ್ಕು ಲೋಕಗಳಲ್ಲಿಯೂ ಯಾವುದೂ ಇಲ್ಲವೆಂದು, ನಾನು ಕರ್ಮ ಮಾಡದೇ ಹೋದರೆ ಎಲ್ಲರೂ ನನ್ನ ಹಾದೀ ಹಿಡಿದು, ಕರ್ಮ ಬಿಡಲು, ಜಾತಿ ಸಾಂಕರ್ಯಾದಿಗಳಿಗೆ ಅವಕಾಶವುಂಟಾಗಿ ಲೋಕವೇ ಹಾಳಾಗುತ್ತದಾದ್ದರಿಂದ ನಾನೂ ಸಹ ಕರ್ಮ ಮಾಡುತ್ತೇನೆ ಎಂದು ಶ್ರೀ ಕೃಷ್ಣಪರಮಾತ್ಮನು ಹೇಳಿದ್ದಾನೆ ಆದ್ದರಿಂದ ಅಜ್ಞಾನಿಗಳು ಫಲಾಸೆಯಿಂದ ಕರ್ಮ ಮಾಡುವಂತೆ ಜ್ಞಾನಿಗಳೂ ಸಹ ಫಲಾಸೆಯನ್ನು ಬಿಟ್ಟೂ ಲೋಕಶಿಕ್ಷಾರ್ಥವಾಗಿಯೂ ಸತ್ಕರ್ಮಗಳನ್ನು ಮಾಡಲೇಬೇಕು" (೩-೨೦,೨೫)

ಸತ್ಕರ್ಮ ಮಾಡಬೇಕೆಂದು ನಮ್ಮ ಮನಸ್ಸಿನಲ್ಲಿ ಇದ್ದಾಗ್ಯೂ, ಅದು ನಡೆಯುವುದಿಲ್ಲ. ಪಾಪಕೃತ್ಯಗಳನ್ನು ಮಾಡಬಾರದೆಂದು ಮನಸ್ಸಿನಲ್ಲಿ ಇದ್ದಾಗ್ಯೂ ಪಾಪ ಕೃತ್ಯ ನಡೆದೇ ನಡೆಯುತ್ತದೆ ಈ ರೀತಿ ನಮ್ಮನ್ನು ಬಲಾತ್ಕರಿಸುವಂತೆ ನಮ್ಮ ಇಷ್ಟಕ್ಕೆ ಪ್ರತಿಭಟಿಸುವ ಶತ್ರುಯಾರೆನ್ನುವಿರೋ? (೩-೩೬) ಅದೇ ಕಾಮವು

**ಕಾಮ ಕ್ರೋಧಾದಿ ತ್ಯಾಗ**

ಈ ಕಾಮ (ಆಶಾ) ವೆಂಬ ಮಹಾ ಶತ್ರುವನ್ನು ಬೇಕಾದ್ದನ್ನು ಕೊಟ್ಟು ತೃಪ್ತಿಪಡಿಸಿ, ಅದರ ಕಾಟವನ್ನು ತಪ್ಪಿಸಿಕೊಳ್ಳೋಣವೆಂದರೆ ಅದು ಸಾಧ್ಯವಲ್ಲ. ಬೆಂಕಿಯನ್ನು ಸವ್ರದೆಯಿಂದ ತೃಪ್ತಿಪಡಿಸುವುದು ಹೇಗೆ ಸಾಧ್ಯವಲ್ಲವೋ ಹಾಗೆಯೇ ಬೇಕಾದ್ದನ್ನು ಕೊಟ್ಟು ಕಾಮವನ್ನು ತೃಪ್ತಿಪಡಿಸುವುದೂ ಸಾಧ್ಯವಲ್ಲ. ಈ ಪಾಪಿ ಕಾಮವು ಭೋಗ್ಯ ಪದಾರ್ಥಗಳನ್ನು ಆಹಾರ ಕೊಟ್ಟಹಾಗೆಲ್ಲಾ ಬೆಳೆದು ಮತ್ತಷ್ಟು ನಮ್ಮನ್ನು ಬಾಧಿಸುತ್ತದೆ (೩-೩೭). ಮನಸ್ಸಿನಲ್ಲಿ ಧ್ಯಾನ ಮಾಡುವುದರಿಂದ ಕಾಮ ಹುಟ್ಟುತ್ತದೆ. ಆ ಕಾಮದಿಂದ ಭೋಗಕ್ಕೆ ಪ್ರಯತ್ನಪಡಲು ಅದಕ್ಕೆ ಯಾರಾದರೂ ಅಡ್ಡಿಮಾಡಿದರೆ ಅದರಲ್ಲಿ ಕ್ರೋಧ ಹುಟ್ಟುವುದು ಕೋಪದಿಂದ ಕರ್ತವ್ಯಾಕರ್ತವ್ಯ ಜ್ಞಾನತಪ್ಪಿ ಮೋಹವುಂಟಾಗುವುದು. ಅದರಿಂದ ವಿಧಿನಿಷೇಧಗಳನ್ನು ಮರೆತು ದುರ್ಬುದ್ಧಿಮಾಡಿ ನರಕಾದ್ಯನರ್ಥಕ್ಕೆ ಗುರಿಯಾಗುತ್ತಾನೆ (೨-೬೨,೬೩). ನಾನಾ ವಿಧಗಳಾದ ಆಸೆಗಳೆಂಬ ಪಾಶಗಳಿಂದ ಬಿಗಿಯಲ್ಪಟ್ಟ ಪುರುಷನು ಅನ್ಯಾಯದಿಂದ ದ್ರವ್ಯ ಸಂಪಾದನೆಮಾಡಲು, ಹೊಗೆಯಿಂದ ಆವರಿಸಲ್ಪಟ್ಟ ಬೆಂಕಿಯ ಬೆಳಕು ಹೇಗೆ ಅಡಗಿಹೋಗುವುದೋ

ಹಾಗೆ, ಕಾಮದಿಂದ ಆವರಿಸಲ್ಪಟ್ಟ ಜ್ಞಾನಿಯ ಧರ್ಮಜ್ಞಾನವು ಅಡಗಿ ಹೋಗುವುದು (೩-೩೮). ಮನಸ್ಸು ಮೊದಲಾದ ಇಂದ್ರಿಯಗಳ ಆಶ್ರಯ ದಿಂದ ಈ ಕಾಮವು ಪ್ರಾಣಿಗಳನ್ನು ಮೋಹಪಡಿಸುತ್ತದೆ (೩-೪೦). ಈ ಕಾಮ ಕ್ರೋಧ ಲೋಭಗಳು ಮೂರೂ ನರಕಕ್ಕೆ ಬಾಗಿಲೆಂದು ತಿಳಿಯಬೇಕು. (೧೬-೨೧). ಅನುಕೂಲ ವಿಷಯಗಳಲ್ಲಿ ಕಾಮವೂ, ಪ್ರತಿಕೂಲ ವಿಷಯಗಳಲ್ಲಿ ಕ್ರೋಧವೂ ಉಂಟಾಗಿ ನಾನಾ ಅನರ್ಥಗಳಿಗೆ ಕಾರಣವಾಗುವುದರಿಂದ ಆ ಎರಡಕ್ಕೂ ಪುರುಷರು ವಶವಾಗಬಾರದು (೩-೩೪).

"ಗಹನಾ ಕರ್ಮಣೋಗತಿಃ"

ಎಂಬ ವಚನಾನುಸಾರ ಫಲಪರ್ಯವಸಾಯಿಯಾಗುವವರೆಗೂ ಸಾಂಗವಾಗಿ ಕರ್ಮವನ್ನು ಮಾಡುವುದು ದುಃಸಾಧ್ಯ. ಮತ್ತು 'ಶ್ರೇಯಾಂಸಿ ಬಹು ವಿಘ್ನಾನಿ' ಎಂಬ ವಚನಾನುಸಾರ ಐಹಿಕ ಭೋಗತ್ಯಾಗ ಪೂರ್ವಕ ಆರಂಭಿ ಸಲ್ಪಟ್ಟ ಸತ್ಕರ್ಮಗಳಿಗೆ ಮಧ್ಯೆ ವಿಘ್ನ ಬಂದರೆ, ಅದುವರೆಗೂ ಪಟ್ಟ ಶ್ರಮೆ ಯು ವ್ಯರ್ಥವಾಗುವುದಲ್ಲದೆ? ಹೀಗೆ ಉಭಯ ಭ್ರ ಷ್ಟನಾಗಿ ಕರ್ಮಭ್ರಂಶದಿಂದ ಪ್ರತ್ಯವಾಯ ಭಾಗಿ ಯಾಗುತ್ತಾನೆ. ಆದ್ದರಿಂದ ಕರ್ಮ ಮಾರ್ಗವ ನ್ನು ತ್ಯಜಿಸುವುದೇ ಯುಕ್ತವು ಎಂದರೆ, ಆ ಆಕ್ಷೇಪವೂ ಸರಿಯಲ್ಲ. (೬-೩೭,೩೮).

ಅಪೂರ್ಣ ಕರ್ಮಕ್ಕೂ ಫಲವುಂಟು

"ಪರಮಾತ್ಮನ ಪ್ರೀತಿಯನ್ನೇ ಉದ್ದೇಶಿಸಿ, ಆರಂಭಿಸಿದ ಕರ್ಮಕ್ಕೆ ಮಧ್ಯೆ ವಿಘಾತವಾದರೂ ಅದರಿಂದ ಇಹಪರ ಹಾನಿಯಿಲ್ಲ. ಅದಕ್ಕಾಗಿ ಪಾಪ ಬರುವುದೆಂಬುದು ಸುತರಾಂ ಅಸಂಗತವಾದದ್ದು. ಸತ್ಕರ್ಮಾಚರಣೆ ಯಿಂದ ಎಂದಿಗೂ ದುರ್ಗತಿಯಾಗಲಾರದು (೬-೪೦). ಕರ್ಮವು ಸಂಪೂ ರ್ಣವಾಗದೆ ಹೋದದ್ದರಿಂದ ಅದು ಮೋಕ್ಷರೂಪ ಮುಖ್ಯ ಫಲವನ್ನುಂಟು ಮಾಡದಿದ್ದರೂ, ಆ ವಿಘಾತ ಹೊಂದಿದ ಸತ್ಕರ್ಮದ ಭಾಗದಿಂದ ಬಹು ಕಾಲ ಸ್ವರ್ಗಾದಿಗಳಲ್ಲಿ ಸುಖವನ್ನನುಭವಿಸಿ ಅನಂತರ ಸದಾಚಾರ ಸಂಪನ್ನ ರಾದ ಶ್ರೀಮಂತರ ಮನೆಯಲ್ಲಿ ಜನಿಸುತ್ತಾನೆ (೬-೪೧). ಅಥವಾ ಬ್ರಹ್ಮ

ಜ್ಞಾನಿಗಳಾದ ಯೋಗಿಗಳ ಕುಲದಲ್ಲಿ ಹುಟ್ಟುತ್ತಾನೆ. ಈ ಎರಡು ವಿಧ ಜನ್ಮವೂ ಈ ವಿಧ ಪುಣ್ಯಮಾಡದವರಿಗೆ ಲಭ್ಯವಲ್ಲ (೬-೪೨). ಈ ಎರಡು ಜನ್ಮಗಳಲ್ಲಿಯೂ ಪೂರ್ವಜನ್ಮಸಂಸ್ಕಾರ ಬಲದಿಂದ ಸತ್ಕರ್ಮಮಾಡಿ ಮೋಕ್ಷಹೊಂದುತ್ತಾನೆ. ಮತ್ತು ಸತ್ಕರ್ಮಮಾಡಬೇಕೆಂಬ ಆರಂಭಮಾತ್ರವೂ ಸಫಲವಾಗುವಲ್ಲಿ, ಕೆಲವು ಕಾಲದ ಆಚರಣೆಯು ಮೋಕ್ಷಕಾರಣವಾಗದೇ ಹೋಗದು (೨-೪೦) (೬-೪೩, ೪೪). ಈ ರೀತಿ ಅನೇಕ ಜನ್ಮಗಳಲ್ಲಿನ ಸತ್ಕರ್ಮಾಚರಣೆಯಿಂದ ಪರಿಶುದ್ಧನಾಗಿ ಅನೇಕ ಜನ್ಮಗಳ ಸಾಧನೆಯಿಂದ ಬ್ರಹ್ಮಾಪರೋಕ್ಷಜ್ಞಾನವನ್ನು ಸಂಪಾದಿಸಿ ಅದರಿಂದ ಮುಕ್ತಿ ಹೊಂದುತ್ತಾನೆ (೬-೪೫).

ವೇದದಲ್ಲಿ ಹೇಳಿದ ಜ್ಯೋತಿಷ್ಟೋಮಾದಿ ಯಾಗಗಳಿಂದ ಐಹಿಕ ಪಾರತ್ರಿಕವಾದ ಪತ್ನೀಪುತ್ರ ಧನಾದಿಗಳೂ ಮತ್ತು ಸ್ವರ್ಗವೂ ಪ್ರಾಪ್ತವಾಗುತ್ತವೆಯೇ ಹೊರತು, ಮೋಕ್ಷಪ್ರಾಪ್ತವಾಗುವುದಿಲ್ಲ ಎಂಬುದು ಸರಿಯಲ್ಲ.

**ಕರ್ಮಕ್ಕಿಂತಲೂ ಜ್ಞಾನಕ್ಕೆ ಶ್ರೇಷ್ಠತೆ.**

ಹೇಗೆ ಒಂದು ಕಸಿಮಾವಿನ ಮರದಲ್ಲಿ ಕಾಲವಿಳಂಬದಿಂದಲೂ ಅನೇಕ ಶ್ರಮಗಳಿಂದಲೂ ಆಗುವ ಮುಖ್ಯ ಪ್ರಯೋಜನವಾದ ಹಣ್ಣುಗಳನ್ನು ತಿಂದು ಆನಂದಪಡಬಹುದೆಂಬ ಮುಂದಿನ ತಿಳಿವಳಿಕೆಯಿಲ್ಲದ ಮೂಢನು, ಆ ಮರದಲ್ಲಿ ಸ್ವಲ್ಪ ಕಾಲದಲ್ಲಿ ಸ್ವಲ್ಪ ಪರಿಶ್ರಮದಿಂದ ದೊರೆತ ಹುವ್ವೇ ಮುಖ್ಯ ಪ್ರಯೋಜನವೆಂದು ಭಾವಿಸಿ, ಹುವ್ವನ್ನೆಲ್ಲಾ ಕಿತ್ತು ಚಟ್ನಿಮಾಡಿಸಿ ಒಪ್ಪೊತ್ತಿನ ಅಲ್ಪ ಸುಖವನ್ನು ಹೊಂದುವನೋ, ಹಾಗೆಯೇ ವೇದೋಕ್ತ ಯಜ್ಞಾದಿಗಳಿಗೆ ಹುವ್ವಿನಂತೆ ಅಮುಖ್ಯ ಫಲವಾದ ಸ್ವಲ್ಪ ಕಾಲದಲ್ಲೇ ಸ್ವಲ್ಪ ಶ್ರಮದಿಂದಲೇ ದೊರೆವ ಸ್ವರ್ಗ, ಪತ್ನೀ ಪುತ್ರಾದಿ ಸುಖವೇ ಮುಖ್ಯ ಪ್ರಯೋಜನನೆಂದು ಭ್ರಮಿಸಿ, ಮೋಕ್ಷವೆಂಬ ಮಹಾ ಫಲಕ್ಕೆ ಇದು ಕಾರಣವೆಂಬ ಸಂಗತಿಯನ್ನರಿಯದವನು ಮೂಢನೆಂದು ತಿಳಿಯಬೇಕು (೨-೪೨). ಆದ್ದರಿಂದ ಹುವ್ವಿನಂತಿರುವ ಸ್ವರ್ಗಾದಿ ಅಶಾಶ್ವತ ಸುಖವನ್ನೇ ಮುಖ್ಯ ಫಲವೆಂದು ಭ್ರಮಿಸದೆ, ಯಜ್ಞಾದಿಗಳನ್ನು ಅಶಾಶ್ವತ ಸುಖಕ್ಕಾಗಿ ಉಪಯೋಗಿಸದೆ, ಅದರಿಂದ ಜ್ಞಾನದ್ವಾರಾ ದೊರೆವ ಮೋಕ್ಷವೆಂಬ ಹಣ್ಣನ್ನು ಭುಜಿಸುವವನೇ

ವಿನೇಕಿಯು. ಆದಕಾರಣ ಕರ್ಮದಿಂದಾಗುವ ಸ್ವರ್ಗಾದಿ ಪ್ರಯೋಜನವು ಶ್ರೇಷ್ಠವಲ್ಲವಾದ್ದರಿಂದ, ಅದಕ್ಕಾಗಿ ಮಾಡುವ ಕಾಮ್ಯ ಕರ್ಮವು ಶಾಶ್ವತಾನಂದರೂಪ ಮೋಕ್ಷ ಫಲವುಳ್ಳ ಬ್ರಹ್ಮಜ್ಞಾನಕ್ಕಿಂತಲೂ ಕೀಳೆಂತಲೇ ತಿಳಿಯಬೇಕು.

ಹಾಗಾದರೆ, ಯಜ್ಞಾದಿ ಸತ್ಕರ್ಮಗಳನ್ನು ಅಶಾಶ್ವತವೆಂದು ಕೀಳಾದ ಸ್ವರ್ಗ ಸಂತಾನ ಸೌಭಾಗ್ಯಗಳಿಗೋಸ್ಕರ ಉಪಯೋಗಿಸಿಕೊಳ್ಳಬಾರದೆ,

ಕರ್ಮಕಾಂಡದ ಮುಖ್ಯ ತಾತ್ಪರ್ಯ

ಎಂದರೆ – 'ಜ್ಯೋತಿಷ್ಟೋಮ ಯಜ್ಞದಿಂದ ಸ್ವರ್ಗವಾಗುವುದು. ಪುತ್ರೇಷ್ಟಿಯಿಂದ ಸಂತಾನ ವೃದ್ಧಿಯಾಗುವುದು' ಎಂದು ವೇದದಲ್ಲಿ ಹೇಳಿದ್ದು ಮೋಸವೆಂದಾಯಿತಲ್ಲ, ಎಂಬ ಆಕ್ಷೇಪವೂ ಸರಿಯಲ್ಲ.

**'ರೋಚನಾರ್ಥಂ ಫಲಶ್ರುತಿಃ'**
**'ಯಥಾ ಭೈಷಜ್ಯ ರೋಚನಂ'**

ಎಂಬ ವಚನಾನುಸಾರ, ಹೇಗೆ ಸಣ್ಣ ಮಕ್ಕಳಿಗುಂಟಾಗುವ ಜ್ವರಾದಿ ರೋಗ ಪರಿಹಾರಕ್ಕಾಗಿ, ಕಹಿಯಾಗಿರುವ ಕಷಾಯ ಮೊದಲಾದ ಔಷಧಗಳನ್ನು ಕುಡಿಸಲು ಅದರಲ್ಲಿ ಮಕ್ಕಳಿಗೆ ಆಸೆಯುಂಟಾಗುವುದಕ್ಕೋಸ್ಕರ, ಬತ್ತಾಸು ಕಾಸು ಮುಂತಾದುವುಗಳನ್ನು ಕೊಡುವುದಾಗಿ ಫಲಾಸೆಯನ್ನು ತೋರಿಸಿ, ಔಷಧ ಕುಡಿಯುವ ಅಭ್ಯಾಸವನ್ನುಂಟುಮಾಡಿ, ಆ ಮೂಲಕ ಆರೋಗ್ಯವೆಂಬ ಮಹಾ ಫಲವನ್ನು ದೊರಕಿಸುವರೋ, ಹಾಗೆ ಮಹಾ ಫಲವಾದ ಮೋಕ್ಷಕ್ಕೆ ಕಾರಣವಾದ ಬ್ರಹ್ಮಜ್ಞಾನ ಪ್ರಾಪ್ತಿಗೆ ಉಪಾಯವಾದ ಯಜ್ಞಾದಿ ವರ್ಣಾಶ್ರಮ ಧರ್ಮಗಳು, ದ್ರವ್ಯವ್ಯಯ ದೇಹಾಯಾಸ ಸಾಧ್ಯವಾದ್ದರಿಂದ ತತ್ಕಾಲದಲ್ಲಿ ಕಷ್ಟವಾಗಿ ಕಾಣುವ ಕರ್ಮಗಳಲ್ಲಿ ಅಲ್ಪಾಧಿಕಾರಿಗಳಿಗೆ ಐಹಿಕ ಸುಖದ ಆಸೆಯನ್ನು ತೋರಿಸಿ,-ನಿಷಿದ್ಧ ಕಾರ್ಯಗಳಲ್ಲಿ ನುಗ್ಗದಂತೆ ಸತ್ಕಾರ್ಯಗಳಲ್ಲಿಯೇ ಮನಸ್ಸನ್ನು ಸೆಳೆದು, ಶುದ್ಧಿಮಾಡಿ ಜ್ಞಾನ ಮಾರ್ಗವನ್ನು ತೋರಿಸಿ, ತನ್ಮೂಲಕ ಶಾಶ್ವತಾನಂದರೂಪ ಮೋಕ್ಷವನ್ನುಂಟುಮಾಡುವ ಉದ್ದೇಶವಿರುವುದರಿಂದ, ಪುತ್ರಾದಿ ನಶ್ವರ ಫಲವನ್ನು ತೋರಿಸುವ ವೇದಭಾ

ಗವು ಮೋಸವೆಂದೆಣಿಸಬಾರದು. ಸತ್ವಾದಿ ತ್ರಿಗುಣ ವಿಕಾರವಾದ ಸ್ವರ್ಗಾದಿ ಫಲಗಳನ್ನು ರುಚಿ ತೋರಿಸುವುದಕ್ಕಾಗಿ ವೇದಗಳು ಹೇಳಿದ್ದಾಗ್ಗೂ, ಅದರಲ್ಲಿ ತಾತ್ಪರ್ಯವಿಲ್ಲವಾದ್ದರಿಂದ ಆ ತ್ರಿಗುಣ ಸಂಬಂಧಿ ಫಲಗಳಲ್ಲಿ ಆಸೆಯುನ್ನು ಬಿಟ್ಟು, ವಿಷ್ಣ್ವಾಖ್ಯ ಪರಬ್ರಹ್ಮನ ಮಹಿಮೆಯನ್ನು ತಿಳಿಸಿ ಮೋಕ್ಷವನ್ನು ಕೊಡುವುದರಲ್ಲಿಯೇ ಸಕಲ ವೇದಗಳಿಗೆ ಮುಖ್ಯ ತಾತ್ಪರ್ಯವೆಂದು ತಿಳಿದು, ಮೋಕ್ಷಕ್ಕೆ ಸಮೀಪ ಕಾರಣವಾದ ಬ್ರಹ್ಮಜ್ಞಾನವು, ಕರ್ಮಕ್ಕಿಂತಲೂ ಶ್ರೇಷ್ಠವೆಂದು ತಿಳಿಯಬೇಕು (೨-೪೬-೪೫).

ಜ್ಞಾನದಿಂದಾಗುವ ಮೋಕ್ಷವು ಕರ್ಮದಿಂದಾಗುವುದಿಲ್ಲ. ಕರ್ಮದಿಂದ ದೊರೆಯುವ ಕಳತ್ರ ಪುತ್ರ ಮಿತ್ರಾದಿ ಸುಖವೂ ಸ್ವರ್ಗಾದಿ ಸುಖವೂ ಜ್ಞಾನದಿಂದ ಆಗುವುದಿಲ್ಲವಾದ್ದರಿಂದ, ಎರಡೂ ಸಮವೆಂಬ ಆಕ್ಷೇಪವೂ ಸರಿಯಲ್ಲ. ಹೇಗೆ ಚಿಕ್ಕದೊಂದು ಕುಂಟೆಯಿಂದಾಗುವ ಕಾರ್ಯವೆಲ್ಲಾ ಕೆರೆಯಿಂದ ಆಗುವುದೋ ಆದರೆ ಆ ಭಾರೀ ಕೆರೆಯಿಂದ ಆಗುವ ಸಾಗುವಳೀ ಮುಂತಾದ ಕಾರ್ಯವು ಆ ಚಿಕ್ಕ ಕುಂಟೆಯಿಂದ ಹೇಗೆ ಸಾಧ್ಯವಿಲ್ಲವೋ, ಈ ಭಾಗದಲ್ಲ ಕೆರೆಯು ಹೇಗೆ ಶ್ರೇಷ್ಠವೋ, ಹಾಗೆಯೇ ಧಾನ್ಯ ದೊರೆಯಬೇಕೆಂದು ಕೃಷಿಮಾಡಿದರೆ, ಧಾನ್ಯ ದೊರೆಯುವುದು ಮಾತ್ರವಲ್ಲದೆ, ಅದರೊಂದಿಗೇ ಹುಲ್ಲೂ ಹೊಟ್ಟೂ ಸಹ ದೊರೆಯುವಂತೆ, ಯಜ್ಞಾದಿ ಸತ್ಕರ್ಮಾನುಷ್ಠಾನದಿಂದಾಗುವ ಸ್ವರ್ಗಾದಿ ಸುಖವೂ, ಪುತ್ರಾದಿ ಸುಖವೂ, ಜ್ಞಾನಿಗೆ ದೊರೆಯುವುದು.

ಜ್ಞಾನ ಮಹಿಮೆ

ಯಂ ಯಂ ಲೋಕಂ ಮನಸಾ ಸಂ ವಿಭಾತಿ
ವಿಶುದ್ಧ ಸತ್ವಃ ಕಾಮಯತೇಯಾಂಶ್ಚ ಕಾಮಾನ್
ತಂ ತಂ ಲೋಕಂ ಜಯತೇತಾಂಶ್ಚ ಕಾಮಾ
ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ'

ಎಂಬ ಶ್ರುತಿವಚನವೂ ಮೇಲೆ ಹೇಳಿದ್ದಕ್ಕೆ ಆಧಾರವಾಗಿದೆ ದ್ರವ್ಯಯಜ್ಞ, ತಪೋಯಜ್ಞ, ಯೋಗಯಜ್ಞ, ಅಧ್ಯಯನಯಜ್ಞ ಮೊದಲಾದ ಸರ್ವ ಯಜ್ಞಗಳೂ ಜ್ಞಾನಾರ್ಥವೇ ಆದ್ದರಿಂದ ಸಕಲ ಯಜ್ಞಗಳಿಗಿಂತಲೂ, ಜ್ಞಾನಯಜ್ಞವೇ ಶ್ರೇಷ್ಠವಾದುದು (೪-೩೩). ಈ ಜ್ಞಾನವು ಗುರುಗಳ ಬಳಿಗೆ

ಹೋಗಿ, ನಮಸ್ಕಾರ ಪೂರ್ವಕ ಸೇವೆಮಾಡಿ ಪ್ರಶ್ನೆಮಾಡಲು, ಗುರುಗಳ ಉಪದೇಶದಿಂದ ಸಂಪಾದನೆ ಮಾಡತಕ್ಕದ್ದು (೪-೩೪). ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಸಮುದ್ರದಂತಿರುವ ಪಾಪರಾಶಿಯನ್ನು ಬ್ರಹ್ಮಜ್ಞಾನವೆಂಬ ಹಡಗಿನಿಂದ ದಾಟಬೇಕು (೪-೩೬). ಲೋಕದಲ್ಲಿ ಜ್ಞಾನಕ್ಕಿಂತಲೂ ಶ್ರೇಷ್ಠವಾದದ್ದು ಯಾವುದೂ ಇಲ್ಲ (೪-೩೮). ಸಕಲ ಕರ್ಮಗಳನ್ನೂ ಭಗವಂತನಲ್ಲಿ ಸಮರ್ಪಿಸಿ ಸಂಪಾದನೆ ಮಾಡಿದ ಜ್ಞಾನವೆಂಬ ಖಡ್ಗದಿಂದ ಸಂಶಯಗಳನ್ನು ನಾಶಮಾಡಿಕೊಂಡ ಭಗವದ್ಭಕ್ತನಿಗೆ ಕರ್ಮಬಂಧ ತಪ್ಪುವುದು (೪-೪೧).

ಪರಬ್ರಹ್ಮನ ಯಾವ ಮಹಿಮೆಗಳ (ಗುಣಗಳ) ಜ್ಞಾನದಿಂದ ಮೋಕ್ಷವಾಗುವುದೋ ಅಂಥ ಜ್ಞೇಯವಾದ ಪರವಸ್ತುವಿನ ಮಹಿಮೆಗಳು ಯಾವುವೆಂದರೆ (೧೩-೧೨) ಈ ಪರಬ್ರಹ್ಮನೇ ಶಬ್ದ ತತ್ವಾಭಿಮಾನಿಗಳಿಂದ ಬ್ರಹ್ಮರುದ್ರಾದಿಗಳಿಗಿಂತಲೂ ಶ್ರೇಷ್ಠನಾದವನು (೩-೪೨). ಪರಬ್ರಹ್ಮನ

**ಜ್ಞೇಯನಾದ ಪರಬ್ರಹ್ಮನ ಮಹಿಮೆ**

ಎಲ್ಲಾ ಅವಯವಗಳಿಗೂ ಕೈ, ಕಾಲು, ಕಣ್ಣು, ತಲೆ, ಮುಖ, ಕಿವಿ ಮೊದಲಾದ ಸಕಲ ಇಂದ್ರಿಯಗಳ ಶಕ್ತಿಯೂ ಉಂಟು (೧೩-೧೪). ಪ್ರಾಕೃತವಾದ ಇಂದ್ರಿಯಗಳಿಲ್ಲದವನು, ಸತ್ವಾದಿ ಪ್ರಾಕೃತ ಗುಣರಹಿತ, ಕಲ್ಯಾಣ ಗುಣ ಪೂರ್ಣ (೧೩-೧೫). ಎಲ್ಲಾ ಪ್ರಾಣಿಗಳ ಒಳಗೂ ಹೊರಗೂ ಇರತಕ್ಕವನು. ದೂರದಲ್ಲಿಯೂ ಸಮೀಪದಲ್ಲಿಯೂ ಇರತಕ್ಕವನು (೧೩-೧೬). ನಾನಾ ವಿಧ ಪ್ರಾಣಿಗಳಲ್ಲಿ ಒಬ್ಬನೇ ಇದ್ದಾಗ್ಯೂ ಬೇರೆ ಬೇರೆ ಇರುವಂತೆ ಅಜ್ಞಾನಿಗಳಿಗೆ ತೋರುವನು ಸಕಲ ಪ್ರಾಣಿಗಳಿಗೂ ಸೃಷ್ಟಿಸ್ಥಿತಿ ಸಂಹಾರಕರ್ತನು (೧೩-೧೧).

ಜ್ಞಾನಸ್ವರೂಪ, ಸರ್ವರ ಹೃದಯದಲ್ಲೂ ನಿಯಾಮಕನಾಗಿ ವಾಸಮಾಡುವವನು (೧೩-೧೭). ಸರ್ವಜ್ಞ, ಅನಾದಿ, ಸರ್ವಶಿಕ್ಷಕ, ಅಣುವಿಗಿಂತಲೂ ಅಣುಭೂತ, ಸರ್ವಾಧಾರ, ಸರ್ವಪೋಷಕ, ಆದಿತ್ಯವರ್ಣ(೮-೯). ತನ್ನೊಳಗೆ ಸರ್ವವನ್ನೂ ಅಡಗಿಸಿಕೊಂಡವನು (೮-೨೨). ಪುಣ್ಯ ಪಾ[illegible]ತ(೫-೧೫).

ಆಕಾಶದಂತೆ ಸಕಲ ದೇಹಗಳಲ್ಲಿ ಇದ್ದಾಗ್ಯೂ, ದೇಹದೋಷ ಸಂಪರ್ಕವಿಲ್ಲದವನು (೧೩-೩೨, ೩೩). ಪರಮಾತ್ಮನು, ಎಲ್ಲರಿಗಿಂತ ಮೇಲಿದ್ದು ನೋಡಿಕೊಳ್ಳುವವನು. ತನ್ನ ಇಷ್ಟಾನುಸಾರ, ಬುದ್ಧಿಪೂರ್ವಕ ಪ್ರೇರಣಕರ್ತ, ಮಹಾಶಕ್ತಿವಂತ (೧೩-೨೩). ನೀಚೋಚ್ಚ ವಸ್ತುಗಳಲ್ಲಿ ಇದ್ದಾಗ್ಯೂ, ನಿರ್ದೋಷನಾದ್ದರಿಂದ ಸಮಶಬ್ದವಾಚ್ಯ (೫-೧೯). ಪರಮಾತ್ಮನಿಗೆ ಹಿತವನ್ನು ಮಾಡುವ ಮಿತ್ರನೂ, ಅಹಿತ ಮಾಡುವ ಶತ್ರುವೂ ಇಲ್ಲ (೯-೨೯). ಜನನ ಮರಣ ರಹಿತನಾದಾಗ್ಯೂ ತನ್ನ ಸ್ವಭಾವಾನುಸಾರ ಸ್ವೇಚ್ಛೆಯಿಂದ ಅವತರಿಸುವವನು (೪-೬). ಸಜ್ಜನ ರಕ್ಷಣೆ, ದುಷ್ಟ ಶಿಕ್ಷಣೆ, ಧರ್ಮಸ್ಥಾಪನೆ ಇವುಗಳಿಗಾಗಿ ಆಗಾಗ್ಗೆ ಅವತರಿಸುವವನು (೪-೮). ಇಂಥಾ ಪರಬ್ರಹ್ಮನು ಯಾರೆಂದರೆ ಶ್ರೀಕೃಷ್ಣನೇ! (೧೦-೧೨).

ಶ್ರೀಕೃಷ್ಣನೇ ಪರಬ್ರಹ್ಮ

ಶ್ರೀಕೃಷ್ಣನು ಮಹಾಲಕ್ಷ್ಮಿಗೂ, ಮುಕ್ತರಿಗೂ ಮೋಕ್ಷಕ್ಕೂ ಆಧಾರನಾದವನು (೧೪-೨೭). ಪಂಚ ಮಹಾಭೂತ ಮೊದಲಾದ ಕ್ಷೇತ್ರಗಳನ್ನು ಸಾಕಲ್ಯೇನ ತಿಳಿದವನಾದ್ದರಿಂದ ಕ್ಷೇತ್ರಜ್ಞ ಶಬ್ದವಾಚ್ಯ (೧೩-೩). ಯಜ್ಞಾದಿ ಭೋಕ್ತ, ಸರ್ವಲೋಕಗಳಿಗೂ ಶ್ರೇಷ್ಠನಾದ ಒಡೆಯ. ಸಜ್ಜನೋಪಕಾರಿ.

ಶ್ರೀಕೃಷ್ಣ ಸರ್ವೋತ್ತಮ-ಜೀವೇಶ್ವರ ಭೇದ

ಲೋಕದಲ್ಲಿ ಕ್ಷರ, ಅಕ್ಷರ ಎಂದು ಪುರುಷರು ಎರಡು ವಿಧ. ನಾಶಹೊಂದತಕ್ಕ ದೇಹವುಳ್ಳ ಚತುರ್ಮುಖ ಬ್ರಹ್ಮಾದಿ ತೃಣಜೀವ ಪರ್ಯಂತ ಪ್ರಾಣಿಗಳೇ ಕ್ಷರ ಪುರುಷರು. ಆಕಾಶದಂತೆ ವಿಕಾರವಿಲ್ಲದೆ ನಾಶಹೊಂದದ ದೇಹವುಳ್ಳ ಮಹಾಲಕ್ಷ್ಮಿಯು (ಚೈತನ್ಯಪ್ರಕೃತಿ) ಅಕ್ಷರಪುರುಷಳು. ಈ ಎರಡು ವಿಧ ಚೇತನರಿಂದ ಭಿನ್ನ ಮತ್ತು ಉತ್ತಮನಾದ ಪುರುಷನೇ ಪರಮಾತ್ಮ (ಉತ್ತಮನಾದ ಆತ್ಮ) ನೆಂದು ವೇದಗಳಲ್ಲಿ ಕರೆಯಿಸಿಕೊಳ್ಳಲ್ಪಡುವನು. ಈತನೇ ಮೂರು ಲೋಕಗಳನ್ನೂ ಪ್ರವೇಶಿಸಿ, ಅವುಗಳನ್ನು ಧರಿಸಿ ಪೋಷಿಸುವನು. ಲೋಕವೆಲ್ಲಾ ನಷ್ಟವಾದರೂ ಆತನಿಗೆ ನಾಶವಿಲ್ಲ. ಅತಏವ ಅದ್ಭುತ ಸಾಮರ್ಥ್ಯ ಸಂಪನ್ನನು. ಮೇಲೆ ಹೇಳಿದ ಕ್ಷರಾಕ್ಷರ ಚೇತನ

ರಿಗಿಂತ, ಶ್ರೇಷ್ಠನಾದ್ದರಿಂದಲೇ ಶ್ರುತಿ ಸ್ಮೃತ್ಯಾದಿಗಳಲ್ಲಿ ಪುರುಷೋತ್ತಮ ನೆಂದು ಪ್ರಸಿದ್ಧಿ ಹೊಂದಿದವನು ಶ್ರೀಕೃಷ್ಣನೇ! (೧೫-೧೫, ೧೬-೧೮). ಸರ್ವ ಪ್ರಾಣಿಗಳ ಹೃದಯದಲ್ಲಿರುವ ಶ್ರೀಕೃಷ್ಣನಿಂದಲೇ ಸಕಲ ಜೀವರಿಗೆ ಸ್ಮರಣಶಕ್ತಿಯೂ, ಜ್ಞಾನವೂ ಉಂಟಾಗುತ್ತವೆ. ಶ್ರೀಕೃಷ್ಣನೇ ಪರಮ ಮುಖ್ಯ ವೃತ್ತಿಯಿಂದ ಸಕಲ ವೇದಪ್ರತಿಪಾದ್ಯ, ಸಕಲ ವೇದಾರ್ಥಜ್ಞಾನಿ, ಶ್ರೀಕೃಷ್ಣನೇ ಸಕಲ ವೇದಾರ್ಥ ನಿರ್ಣಾಯಕವಾದ ಬ್ರಹ್ಮ ಸೂತ್ರಗಳನ್ನು ವ್ಯಾಸ ರೂಪದಿಂದ ರಚಿಸಿದವನು (೧೫-೧೫).

ದೇವ ಮನುಷ್ಯಾದಿ ಪ್ರಾಣಿಗಳನ್ನು ಪ್ರಸವಿಸುವ ಮಹಾಲಕ್ಷ್ಮಿಯಲ್ಲಿ ಗರ್ಭಾಧಾನ ಮಾಡತಕ್ಕ ತಂದೆಯೇ ಶ್ರೀಕೃಷ್ಣನು (೧೪-೪). ಶ್ರೀಕೃಷ್ಣನೇ ಸರ್ವ ಸರ್ಜಕ, ಸರ್ವಪ್ರೇರಕ, ಸರ್ವರಿಗೂ ತಂದೆತಾಯಿ ಪೋಷಕ ಪೂಜ್ಯ (೯-೧೮). ಸಾತ್ವಿಕ ರಾಜಸ ತಾಮಸ ಪದಾರ್ಥಗಳೆಲ್ಲಾ ಶ್ರೀಕೃಷ್ಣ ನಿಂದಲೇ ಉಂಟಾಗಿ ಆತನ ವಶದಲ್ಲಿವೆ. ಆದರೆ ಆತನು ಅವುಗಳಿಗೆ ವಶ ನಲ್ಲ (೭-೧೨). ಕರ್ಮಫಲಗಳಲ್ಲಿ ಆಸೆಯಿಲ್ಲದವನಾದ್ದರಿಂದ ಕರ್ಮಲೇಪ ವಿಲ್ಲದವನು (೪-೧೪).

ಈ ವಿಧ ಮಹಿಮೆಗಳುಳ್ಳವನೆಂದು, ಪುರುಷೋತ್ತಮನಾದ ಶ್ರೀಕೃಷ್ಣ ನನ್ನು ತಿಳಿದುಕೊಂಡು, ಜಗತ್ತು ಅಸತ್ಯ, ನಾನೇ ಈಶ್ವರ ಇತ್ಯಾದಿ ಆಸುರ ಜ್ಞಾನರಹಿತರಾಗಿ (೧೬-೧೪) ಪರಮಾತ್ಮನನ್ನು ಧ್ಯಾನಮಾಡುತ್ತಾ, ಅಪ ರೋಕ್ಷಜ್ಞಾನವನ್ನು ಹೊಂದಿ, ಮೋಕ್ಷವನ್ನು ಪಡೆಯತಕ್ಕದ್ದು.

ಮೊಕ್ಕಾಂ ಮೈಸೂರು.
ಪ್ರಮೋದನಾಮ ಸಂ|| ಆಷಾಢ ಶು. ೫.

ಪಾಂಡುರಂಗೀ ಕೃಷ್ಣಾಚಾರ್ಯ

## ಗ್ರಂಥಕರ್ತರ ಲಘುಪರಿಚಯ

ಈ 'ಗೀತಾರಂಜನಾಖ್ಯ' ಗ್ರಂಥವನ್ನು ರಚಿಸಿದ ಕವಿವರನು, ಶೇಷಗಿರಿ ರಾಯನೆಂಬ ಮಾಧ್ವ ಬ್ರಾಹ್ಮಣನು. ಈತನ ತಂದೆಯಾದ ರಾಮಚಂದ್ರ ರಾಯನೆಂಬಾತನು, ಕೋಲಾರ ತಾಲ್ಲೂಕಿನ ಮುದವರ್ತಿ ಎಂಬ ಗ್ರಾಮದಲ್ಲಿ ವಾಸವಾಗಿದ್ದನು. ಭಾಗೀರಥಮ್ಮ ಮತ್ತು ರಾಮಚಂದ್ರರಾಯರೆಂಬ ಈ ದಂಪತಿಗಳಿಗೆ ಶೇಷಗಿರಿರಾಯನೊಬ್ಬನೇ ಮಗನಾಗಿ, ಸುಮಾರು ಕ್ರಿ. ಶ. ೧೭೭೮-೭೯ನೆಯ ಸಂವತ್ಸರದಲ್ಲಿ ಜನ್ಮವೆತ್ತಿದನು. ರಾಮಚಂದ್ರರಾಯನು ೧೮೦೦ರಿಂದ ೧೮೩೨ರ ವರೆಗೆ ಮೈಸೂರು ಸಂಸ್ಥಾನವನ್ನು ಆಳಿದ ಶ್ರೀ ಮುಮ್ಮಡಿಕೃಷ್ಣರಾಜ ಒಡೆಯರವರ ಕಾಲದಲ್ಲಿ ಕೋಲಾರ ತಾಲ್ಲೂಕಿನ ಮಾಮಲೇ ಅಧಿಕಾರದಲ್ಲಿದ್ದನೆಂದು ತಿಳಿಯುಬರುತ್ತದೆ ಹೀಗೆ ಈ ಗ್ರಂಥಕರ್ತನು ಪ್ರಸಿದ್ಧ ಮನೆತನಕ್ಕೆ ಸೇರಿದಾತನು.

ಶೇಷಗಿರಿರಾಯನು ಬಾಲ್ಯದಿಂದಲೂ, ಜೈಮಿನಿಭಾರತ, ಕನ್ನಡಬಾರತ ಸಂಗ್ರಹ ಮುಂತಾದ ಕನ್ನಡಭಾಷೆಯ ಉದ್ಗ್ರಂಥಗಳನ್ನು ಪಾಠಮಾಡುತ್ತ, ಯುಕ್ತವಯಸ್ಸು ಬಂದಕೂಡಲೇ ಸಂಸ್ಕೃತ ಭಾಷೆಯನ್ನು ಕಲಿತು, ಗುರುಗಳನ್ನಾಶ್ರಯಿಸಿ ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಗಳನ್ನೂ ಅಭ್ಯಾಸಮಾಡಿದನು. ಸ್ವಾಭಾವಿಕವಾಗಿ ಆತನಿಗೆ ಪ್ರಾಪ್ತವಾದ ಕರ್ಣಾಟಕ ಭಾಷಾ ಸರಳ ಕವಿತಾ ಪ್ರೌಢಿಮೆಯು, ಆತನಲ್ಲಿ ಈ ಬಗೆಯ ಸದ್ಗ್ರಂಥ ರಚನೆಗೆ ಪ್ರೇರಣೆಯನ್ನುಂಟುಮಾಡಿತು. ಆತನು 'ಶ್ರೀ ಗೀತಾರಂಜನಾಖ್ಯ' ಈ ಗ್ರಂಥವನ್ನು ಮಾತ್ರವೇ ಅಲ್ಲದೆ, 'ಶ್ರೀ ಇಂದಿರೇಶವಿಠಲ' ಮುದ್ರಿಕೆಯಿಂದ ಅನೇಕ ದೇವರ ನಾಮಗಳನ್ನೂ, ಹೋಳಿಕಾಖ್ಯಾನ, ನಿರ್ಗುಣಗೀತೆ, ಹಂಸಧ್ವಜನ ಕಥೆ ಮುಂತಾದ ಚಿಕ್ಕ ಚಿಕ್ಕ ಗ್ರಂಥಗಳನ್ನೂ ರಚಿಸಿದ್ದಾನೆಂದು ತಿಳಿಯುಬರುತ್ತದೆ ಹೀಗೆ ಸರ್ವದಾ ಸದ್ಗ್ರಂಥರಚನೆ ಸತ್ಕಾಲಕ್ಷೇಪಾದಿಗಳಲ್ಲೇ ಕಾಲ ಕಳೆಯುತ್ತಿದ್ದ ಈ ಮಹನೀಯನು, ದೀರ್ಘಕಾಲ ಜೀವಿಸಿ, ತನ್ನ ಎಂಭತ್ತನೆಯ ವಯಸ್ಸಿನಲ್ಲಿ (೧೮೭೮) ನಿರಾಯಾಸವಾಗಿ, ಹರಿಸ್ಮರಣಪೂರ್ವಕ ದೇಹತ್ಯಾಗಮಾಡಿ, ಉತ್ತಮ ಗತಿಯನ್ನು ಸಂಪಾದಿಸಿಕೊಂಡನು.

ಈ ಗ್ರಂಥದ ಕೈ ಬರಹದ ಮೂಲಪ್ರತಿಯು, ಶ್ರೀ ಶ್ರೀ ೧೦೮, ಶ್ರೀಮದುತ್ತರಾದಿ ಮಠದ ಶ್ರೀ ದಿಗ್ವಿಜಯ ರಾಮಚಂದ್ರಸ್ವಾಮಿಯವರ ಪದ ಪದ್ಮಾರಾಧಕರಾದ ಶ್ರೀಮತ್ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಸವಾರಿಯು ಈ ಸಾರಿ ಕೋಲಾರ ಪ್ರಾಂತ ಸಂಚಾರಮಾಡಿಕೊಂಡು ಬಂದ ಸಂದರ್ಭದಲ್ಲಿ ದೊರೆತುದು ಈ ಗ್ರಂಥವು ಶ್ರೀ ಶ್ರೀಗಳವರ ಕೃಪಾಕಟಾಕ್ಷಕ್ಕೊಳಪಟ್ಟು ಕನ್ನಡಿಗರ ಸುದೈವದಿಂದ ಈಗ ಪ್ರಕಾಶಕ್ಕೆ ಬರಲು ಅವಕಾಶವಾಯಿತು. ಇದಕ್ಕಾಗಿ ಕನ್ನಡಿಗರು ಶ್ರೀ ಶ್ರೀಗಳವರ ಮಹಾ ಸನ್ನಿಧಾನಕ್ಕೆ ವಿಶೇಷ ಕೃತಜ್ಞರಾಗಿರಬೇಕಾಗಿದೆ.



# ಶ್ರೀ ಭಗವದ್ಗೀತಾ ಪ್ರಶಂಸೆ

ಸಾಂಗತ್ಯ ಪದ ಅಟತಾಳ

**ವಿಷ್ಣೋವಾಚ:—**

ಪ್ರಾರಬ್ಧವ ನುಣುವವನನವರತ ಗೀ । ತಾರಸ ರಸಿಕನಾಗಿರಲು
ಪೂರುಷನವನೆ ಮುಕ್ತನು ಸುಖಿಯಾತನ । ಸಾರವು ಕರ್ಮಲೇಪಗಳು ೧

ಗೀತಾ ಧ್ಯಾನವನೆಸಗುವನನು ಮಹಾ । ಪಾತಕಾದ್ಯಖಿಲ ಪಾಪಗಳು
ಏತೆರದಿಂ ಸೋಂಕವು ತಾವರೆಯೆಲೆ । ಯಾ ತೋಯಬಿಂದು ವಂದದಲಿ ೨

ಎಲ್ಲಿ ಗೀತೆಯ ಪುಸ್ತಕವಿಹುದಾ ಪಾಠ । ವೆಲ್ಲ ಪ್ರವರ್ತಿಸುತಿಹುದು
ಅಲ್ಲಿ ಪ್ರಯಾಗಾದಿ ಸಕಲ ತೀರ್ಥಂಗಳು । ಪಲ್ಲವಿಸುತಲಿರುತಿಹುವು ೩

ಅಲ್ಲಿ ದೇವತೆಗಳು ಋಷಿಗಳು ಯೋಗಿಗ । ಳಲ್ಲಿ ಪನ್ನಗರ ಸಂಚಯವು
ಅಲ್ಲಿಯೆ ಗೋಪಾಲ ಗೋಪಿಕೆಯರ ವೊತ್ತ । ವೆಲ್ಲ ಸನ್ನಿಹಿತವಾಗಿಹುದು ೪

ನಾರದೋದ್ಧವ ಪಾರಿಷದರಿಂ ಸಹಾಯವು । ಸಾರುವುದತಿ ಶೀಘ್ರದಿಂದೆ
ಆರಯಲಾವ ತಾಣದೊಳು ಗೀತೆಯ ವಿ । ಸ್ತಾರ ಪ್ರವರ್ತನವಿಹುದು ೫

ಗೀತಾವಿಚಾರ ಪಠನಪಾಠನ ಶ್ರುತ । ವೇ ತಾಣದೊಳಿರುತಿಹುದು
ಆ ತಾಣದೊಳಗಾನು ವಸಿಪೆನಾವಗವೆಲೆ । ಭೂತಧಾತ್ರಿಯೆ ನಿಜವಾಗಿ ೬

ಪದಿನೆಂಟು ಮಧ್ಯಾಯಂಗಳನು ನಿಶ್ಚಲ ಹೃದ । ಯದೆ ಜಪಿಸುವ ಮಾನವಗೆ
ಒದವಿದಪುದು ಜ್ಞಾನಸಿದ್ಧಿಯಾತನು ಪರ । ಪದವನೊಂದುವನಿದು ನಿಜವು ೭

ಸಂಪೂರ್ಣ ಪಠನಕಾರದನದರೊಳಗರ್ಧ । ಪಂ ಪಠಿಸಲುಬೇಕು ನಿಚ್ಚ
ಆಂಪನಾತನು ಗೋದಾನಜ ಪುಣ್ಯವ । ನಿಂ ಪೃಥ್ವಿ ಸಂದೆಗವಿಲ್ಲ ೮

ಭಾಗೀರಥಿಯ ಸ್ನಾನದಫಲ ವಪ್ಪುದು । ಭಾಗ ಮೂರನು ಪಠಿಸುವಗೆ
ಭಾಗವಾರನು ಜಪಮಾಡುವನಿಗೆ ಸೋಮ । ಯಾಗಫಲವು ಲಭಿಸುವುದು ೯

ವಸುಧೆ ಯಧ್ಯಾಯವ ಶ್ಲೋಕಪಾದವನು ಸಂ । ತಸದೊಳೋದುವ
ನಸುದಿನವು
ಎಸೆವ ಮನ್ವಂತರ ಪರ್ಯಂತ ಕೇಳು ಮಾ । ನುಷತೆಯನಾಂಪನು ನಿಜವು ೧೦

ಪತ್ತುಶ್ಲೋಕವನೇಳನಯ್ದನು ನಾಲ್ಕನು । ಮತ್ತೆ ಮೂರೆರಡೊಂದುವನು
ಉತ್ತಮವೆನಿಪ ಗೀತೆಯೊಳರ್ಧ ಶ್ಲೋಕವ । ನೆತ್ತಾನು ಮೋದುವನರನು ೧೧

ಅಯುತ ಸಂವತ್ಸರ ಪರ್ಯಂತವವನು ನಿ । ಶ್ಚಯವಾಗಿ ವಸಿಸುತಲಿಹನು
ನಯಯುತೆ ಭೂದೇವಿ ಚಂದ್ರಲೋಕದಲಿ ಸಂ । ಶಯವಿಲ್ಲವತಿಶಯದಿಂದ ೧೨

ಗೀತಾಭ್ಯಾಸ ಸಮಾಯುಕ್ತನಳಿ-ಯಲಿ । ಕಾತನಿಗಹುದು ಮಾನುಷತೆ
ಗೀತೆಯ ಮರಳಿ ಮರಳಿಯೋದುವನಿಗೆ । ತಾತಪ್ಪದನುಪಮ ಮುಕ್ತಿ ೧೩

ಗೀತೆಯೆಂದುಚ್ಚರಿಸುತೆ ಮೃತಿಯೊಂದಲು । ಮಾತೇನೊ ಗತಿ ದೊರೆಯುವುದು
ಗೀತಾರ್ಥವ ನೊಲವಿಂದಾಲಿಸುವನು । ಪಾತಕಿಯೆಂದೆನಿಸಿದೊಡಂ
ನೀ ತಿಳಿ ವೈಕುಂಠವಡೆವನು ಹರಿಯೊಡ । ನಾತನು ಮೋದವಾಂತಪನು ೧೪

ಬಹುಳ ಕರ್ಮಂಗಳನೆಸಗಿ ಗೀತಾರ್ಥವ । ನಹರಹಸ್ಸಿನಲಿ ಜಾನಿಪನು
ಮಹಿಯೆ ಕೇಳವ ಜೀವನ್ಮುಕ್ತನು ಪರಪದ । ಸಹಜವವಗೆ ದೇಹಾಂತದಲಿ ೧೫

ಜನಕಾದಿ ಬಹು ಮಹಿಯೆರೆಯರು ಗೀತೆಯ । ನನುದಿನ ವಾಶ್ರಯವೆಸಗಿ
ಅನಘರೆಂದೆನಿಸುತೆ ಜಗದೊಳು ಪರಪದ । ವನು ಪಡೆದರು ಗಾನಮಾಡಿ ೧೬

ಪಠಿಸುತೆ ಗೀತೆಯನದರ ಮಹಾತ್ಮ್ಯವ । ಪಠಿಸದಿದ್ದವನಿಗಾರಯಲು
ಪಠಿಸಿದುದೆಲ್ಲ ವ್ಯರ್ಥವು ಶ್ರಮವೊಂದೆ ಸಂ । ಘಟನೆಯಾದಪುದಿದು ನಿಜವು ೧೭

ಈ ಮಹಾತ್ಮ್ಯದೊಡನೆ ಯಭ್ಯಸಿಸೆ ಸ । ದಾ ಮೋದದಿಂದೆ ಗೀತೆಯನು
ಆ ಮನುಜನು ತತ್ಫಲವನೊಂದುವನು । ದ್ದಾಮಗತಿಯ ಪಡೆಯುವನು ೧೮

ಸೂತೋವಾಚ:—

ಈಗಳಾನೊರೆದ ಸನಾತನಮೆಂದೆನಿ । ಪೀ ಗೀತೆಯ ಮಹಿಮೆಯನು
ಜೇಗ ಗೀತಾಂತದೆ ಪಠಿಸಲು ತತ್ಫಲ । ಭೋಗ ಕೈಸಾರ್ವುದು ಕೇಳೈ ೧೯

ಇಂತು ಶ್ರೀ ವಾರಾಹ ಪುರಾಣದೊಳಗಣ ಗೀತಾ ಮಹಾತ್ಮ್ಯಂ

**ಸಂಪೂರ್ಣಂ**



ಭಾ. ಷ:—

ದಂಡಕಶೆಗಳನೆಡದ ಕೈಯೊಳು
ಕೊಂಡವಗೆ ಸುಜ್ಞಾನ ಮುದ್ರಾ
ಮಂಡಿತಾನ್ಯಕರಂಗೆ ಭಕ್ತರ ಪಾರಿಜಾತನಿಗೆ
ಕುಂಡಲೀಶಶಯಂಗೆ ನೆಗಳ್ದಾ
ಬಂಡಣದೆ ಗೀತಾಮೃತವ ಕರೆ
ದಂಡಜೇಶರಥಂಗೆ ಕೃಷ್ಣಂಗಾನು ನಮಿಸುವೆನು

ಉಪನಿಷತ್ತುಗಳೆಲ್ಲ ಗೋಗಳೆ
ನಿಪುವು ದೋಹನವೆಸಗುವನು ಗೋ
ಪಪತಿ ನಂದನ ನರ್ಜುನನೆಕರು ಗೀತೆಯೇ ಹಾಲು
ನಿಪುಣರೆನಿಸುವ ಸುಧಿಗಳುಪಭೋ
ಗಿಪರೆನಲು ಭಗವತ್ಸುಗೀತೆಯ
ವಿಪುಳ ಮಹಿಮೆಯನರಿವನಾವನು ಲೋಕ ಮೂರರಲಿ



ಶ್ರೀ ಗುರುಭ್ಯೋನಮಃ

ಶ್ರೀ ವೇದವ್ಯಾಸಾಯನಮಃ

# ಶ್ರೀ ಭಗವದ್ಗೀತಾ

## ಪೀಠಿಕೆ

ಪದ ತ್ರಿಪುಟತಾಳ

ಶ್ರೀರಮಣ ಸರ್ವೇಶ ಸರ್ವಶ
ರೀರ ವ್ಯಾಪಕ ತತ್ತ್ವ ಜೀವಾ
ಕಾರನಾಗಿ ಸಮಸ್ತಜೀವರ ಬಿಂಬನಾಗಿರ್ದು ।
ಪ್ರೇರಿಸುತ ತ್ರೈಗುಣ್ಯ ಕರ್ಮವ
ಮಾರಮಣ ತಾ ಮಾಡಿ ಮಾಡಿಸಿ
ಮೀರಗುಡದಲೆ ಯೋಗ್ಯತೆಯ ಅನುಸಾರ ಫಲವೀವ ।  ೧

ಚಾರುಮಂಗಳ ಚರಿತ ಮದ್ಧೃದ
ಯಾರವಿಂದದೊಳಿಪ್ಪ ಕೃಷ್ಣನೆ
ಪ್ರೇರಿಸೆನ ಗನುದಿನದಿ ಸುಜ್ಞಾನಗಳ ಕರುಣದಲಿ ।
ಭಾರತಾಖ್ಯ ಸುಕಲ್ಪತರು ಫಲ
ಸಾರ ಸುಧೆಯಂತಿಪ್ಪ ಗೀತಾ
ವಾರಿಧಿಯೊಳೆನ್ನನುದಿನದಿ ಚರಿಪಂತೆ ಕರುಣಿಪುದು ।  ೨

ಇಂದಿರಾಪತಿ ವಿಠ್ಠಲನೆ ನಾ
ಮಂದಮತಿ ನರನೆಂದು ಕಡೆಗ
ಣ್ಣಿಂದ ನೋಡದೆ ದಾಸನಿವನೆಂತೆಂದು ಕರುಣದಲಿ ।
ಸಿಂದು ಸರ್ವೇಂದ್ರಿಯದಿ ಗಂಗೆಯು
ಸಿಂಧುವಿಗೆ ಅಭಿಮುಖದಿ ಪ್ರವಹಿಸು
ವಂದದಲಿ ಸುಜ್ಞಾನಕೊಡು ಯೆಂದೊಂದಿಸುವೆ ನಿನಗೆ ।

ಪದ ಅಟತಾಳ (ಸಾಂಗತ್ಯದ ಧಾಟಿ)

ವಂದಿಸುವೆನು ಆನಂದತೀರ್ಥರ ಪಾದ
ದ್ವಂದ್ವಕೆ ಭಕ್ತಿ ಭರದಲಿ ।
ಕಂದನ ತಾಯಿ ಪಾಲಿಸುವಂತೆ ಪಾಲಿಸು
ಯೆಂದು ಕೈಮುಗಿದು ಬೇಡುತಲಿ

ವಿಘ್ನರಾಜನ ಪಾದ ಯುಗ್ಮಕೆ ನಮಿಸುವೆ
ಸುಜ್ಞಾನಕೊಡು ಎನಗೆಂದೂ ।
ಭಗ್ನಗೈಸಿ ದುಃಖ ಸತ್ಸಾಧನದಲಿ ನಿ
ರ್ವಿಘ್ನತೆ ಕೊಡು ಕೃಪಾಸಿಂಧೂ

ಕಮಲಸಂಭವಭವ ತ್ರಿದಶಾಧಿಪತಿ ಮುಖ
ಅಮರಗಣಕೆ ವಂದಿಸುವೆನು ।
ವಿಮಲಸುಜ್ಞಾನ ಕೊಡಲೆಂದು ಪ್ರತಿದಿನ
ಕ್ಷಮೆಯುಸುರರಿ ಗೊಂದಿಸುವೆನು

ಪವನ ಮತಾನುಸಾರದಿ ಭಗವದ್ಗೀತಾ
ರ್ಥವ ರಚಿಸುವೆ ಕನ್ನಡದಲಿ ।
ಅವನಿಯೊಳುಳ್ಳ ಸಜ್ಜನರಿದ ಕೇಳಿ ಮಾ
ಧವನೀವ ಮೋಕ್ಷ ದಯದಲಿ

# ಪೀಠಿಕೆ

ಶೇಷ ನಾಮಕನಿಂದ ರಚಿತ ಗೀತಾರ್ಥವು
ಬೇಸರಾದಲೆ ಜನರೆಲ್ಲಾ
ಪ್ರಾಸಗಳರಸದೆ ಹರಿಯ ಮಹಿಮೆಯೆಂದು
ಲ್ಲಾಸದಿ ತಪ್ಪಿದ್ದುದೆಲ್ಲಾ

ತಿದ್ದಬೇಕೆನುತಲಿ ವಿದ್ಯಾವಂತರಿಗೆಲ್ಲ
ಬುದ್ಧಿಪೂರ್ವಕ ನಮಿಸುವೆನು ।
ಮಧ್ವಮತದ ಶುದ್ಧ ಪದ್ಧತಿ ಅರಿತ ಪ್ರ
ಬುದ್ಧನಲ್ಲದ ಮೂಢನರನು

ಇಂದಿರೇಶ ವಿಠ್ಠಲ ಎನ್ನ ಹೃದಯಾರ
ವಿಂದದೊಳಿರ್ದು ತಾ ಮುದದಿ ।
ಇಂದು ಈ ಕೃತಿ ಪೇಳಿದಂದದಿ ಹೇಳಿದೆ
ಕುಂದನೆಣಿಸದೆ ಕೇಳಿ ದಯದಿ



# ಶ್ರೀ ಮ ದ್ಭ ಗ ವ ದ್ಗೀ ತಾ

## ಮೊದಲನೆಯ ಅಧ್ಯಾಯ

---

ಧೃತರಾಷ್ಟ್ರ ಉವಾಚ:—

ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ
ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ೧

ಸಂಜಯ ಉವಾಚ:—

ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ
ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ೨

---

ಅಷ್ಟಪದೀ ಗದ್ಯಾ:—

ಕುರು ಪಾಂಡವರ ರಣದ ಚರಿಯವನು ಕಂಡಂತೆ
ಕುರುಪತಿಗೆ ಅರುಹಲೋಸುಗ ಬಾದರಾಯಣನು
ಕರುಣದಲಿ ಸಂಜಯನ ನೇಮಿಸಿರೆ ಸುಜ್ಞಾನ ವರಮುನಿ
ಯನುಗ್ರಹದಲಿ ||

ಅರಿತು ಪೇಳುತಲಿರಲು ಬೆಸಗೊಂಡನಾಗ ಕುರು
ವರನು ಧರ್ಮಕ್ಷೇತ್ರವಾದ ಕುರುಕ್ಷೇತ್ರದಲಿ
ಬೆರೆದು ನಮ್ಮವರು ಪಾಂಡವರು ಯುದ್ಧಾರ್ಥಿಗಳ್ಕರಳೇನು
ಮಾಳ್ಪರೆಂದು || ೧

ಆರ್ಯಾ:—

ಕೇಳುರಾಜ ಪಾಂಡವರ ಸೈನ್ಯವನು
ಕಾಳಗಕನುವಾಗಿರೆ ನೋಡೀ |
ಖೂಳ ನಿನ್ನಮಗ ದ್ರೋಣನ ಬಳಿಗೈ
ದ್ದೇಳವಾರ್ಥ ನುಡಿದನು ಮೋಡೀ || ೨

ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್
ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ೩

ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ೪

ಧೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್ ।
ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ೫

ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ೬

---

ಪದ ಅಟತಾಳ (ಸಾಂಗತ್ಯದ ಧಾಟಿ)

ಗುರುವರ ತವ ಶಿಷ್ಯನಾಗಿಹ ದ್ರುಪದ ಕು
ವರನಿಂದ ವ್ಯೂಹ ರಚಿಸಿದಾ ।
ನೆರೆದ ಮಹಾಸೇನೆ ಪರಿಯ ನೋಡೈ ಬಹು
ಭರಿತ ವೀರರು ಮೋಹರಿಸಿದ ೩

ಇಲ್ಲಿ ನೋಡೈ ಭೀಮಾರ್ಜುನರಿಗೆ ಸಮಯುದ್ಧ
ದಲ್ಲಿ ಮಹಾಬಿಲ್ಲ ಧರಿಸಾ
ಬಲ್ಲಿದ ರಥಿಕ ದ್ರುಪದ ಯುಯುಧಾನನು
ಮಲ್ಲವಿರಾಟೆಂಬ ಕ್ಷಿತಿಪಾ ೪

ಧೃಷ್ಟಕೇತು ಚೇಕಿತಾನ ಪುರುಜಿತ್ತು
ಧಿಟ್ಟ ಕಾಶಿಪ ಶೈಬ್ಯರಾಯ ।
ಶ್ರೇಷ್ಠ ಕುಂತೀಭೋಜ ವಿಕ್ರಾಂತ ಉತ್ತಮೌ
ಜೇಷ್ಠ ಯುಧಾಮನ್ಯುರಾಯಾ ೫

ವೀರ ಸೌಭದ್ರ ಪಾಂಚಾಲಿಯ ಪಂಚ ಕು
ಮಾರರು ಮೊದಲಾದ ನೃಪರು ।
ವೀರರೆಲ್ಲರು ಮಹಾ ರಥಿಕರು ಪ್ರಾಣವ
ಧಾರೆಯ ನೆರೆದು ನಿಂತಿಹರು ೬

ಅಸ್ಮಾಕಂ ತು ವಿಶಿಷ್ಟಾಯೇ ತಾನ್ನಿಬೋಧ ದ್ವಿಜೋತ್ತಮ
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ಬ್ರವೀಮಿ ತೇ ೭

ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ೮

ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ |
ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ೯

ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ |
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ೧೦

---

ಗುರುವರ ನಮ್ಮ ಸೇನೆಯ ಶ್ರೇಷ್ಠ ರಥಿಕರ
ಅರುಹುವೆ ಸಂಜ್ಞಾರ್ಥವಾಗಿ
ಧುರದೊಳು ಬಲ್ಲಿದ ನಾಯಕರಾದಂಥ
ಧೊರೆಗಳ ಪೆಸರನೆ ಬಾಗಿ ೭

ನೀನು ಭೀಷ್ಮನು ಕರ್ಣ ಕೃಪ ಯುದ್ಧದಲಿ ಗೆಲು
ವೋನು ಅಶ್ವತ್ಥಾಮ ಹೀಗೆ
ಮಾನಿ ವಿಕರ್ಣನು ಸೋಮದತ್ತನ ಕುವ
ರ-ನು ರಣದಿ ಶೂರರ್ಹೀಗೆ ೮

ಇನ್ನು ಕೆಲರು ಬಹು ಪೆಸರುಳ್ಳವರು ಕೇಳು
ಎನ್ನ ನಿಮಿತ್ತಾದಿ ಪ್ರಾಣ
ವನ್ನೆ ತ್ಯಕ್ತರಾಗಿ ನಾನಾಸ್ತ್ರ ಶಸ್ತ್ರಗ
ಳನ್ನೆ ಪ್ರಹರಣಾ ಪ್ರವೀಣಾ ೯

ಯುದ್ಧಮಾರ್ಗದಿ ಸರ್ವರಾಯರು ಬಹಳ ಪ್ರ
ಬುದ್ಧ-ರು ಸಂಖ್ಯಾಗೋಚರರು
ಇದ್ದರು ನಮ್ಮ ಸೇನೆಯ ರಕ್ಷಿಪುದಕೆ ಸ
ಸ್ನದ್ಧ ಭೀಷ್ಮನೆ ಅರ್ಹಪರರೂ ೧೦

ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ
ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ೧೧
ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ೧೨
ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ
ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ೧೩
ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ
ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ೧೪

---

ಗಣನವುಳ್ಳವರ ಸೇನೆಯ ರಕ್ಷಿಸಲು ಭೀಮ
ಹೊಣೆಗಾರನೆಂದೆನಿಸುವನೊ
ರಣದಿ ಯುದ್ಧ ಮಾರ್ಗದಲ್ಲಿ ಭಾಗಿಸಿ ನಿಂತಾ
ಗಣಿತ ವೀರರ ಕೂಡಿ ನೀನು ೧೧

ಕುರುಪಿತಾಮಹನ ರಕ್ಷಿಸು ಎಂದು ನುಡಿಯಲು
ಹರುಷ ಪುಟ್ಟಿಸುತ ಕುರುಪಗೆ
ಹರಿಯಾಕ್ಷನಂತುಚ್ಚ ಧ್ವನಿಗೈದು ಭೀಷ್ಮನು
ದರವ ನೂದಿದ ಕ್ಷಣದಾಗ ೧೨

ಭೇರಿದುಂದುಭಿ ಶಂಖ ಪಣವ ಗೋಮುಖವು ತು
ತ್ತೂರಿ ಆನಕ ಮುರುಜಾದೀ
ಘೋರವಾದ್ಯವು ಒಮ್ಮೆ ಮೊರೆಯಲು ಕರ್ಣ ಕ
ಠೋರವಾದುದು ರೋಮಾಂಚನದಿ ೧೩

ಇಂದಿರೇಶ ವಿಠಲನು ಸವ್ಯಸಾಚಿಯು
ಚಂದಾದ ಶ್ವೇತ ಕುದುರೆಗ-
ಳಿಂದ ಯುಕ್ತ ರಥದಲಿ ಸ್ಥಿತರಾದವ
ರಂದೂದಿದರು ಶಂಖ ಬೇಗ ೧೪

ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ
ಪೌಂಡ್ರಂದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ೧೫
ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ
ನಕುಲಸ್ಸಹದೇವಶ್ಚ ಸುಘೋಷ ಮಣಿಪುಷ್ಪಕೌ ೧೬
ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ೧೭
ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ
ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ೧೮
ಸಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್
ನಭಶ್ಚ ಪೃಥಿವೀಂ ಚೈವ ತುಮುಲೋವ್ಯನುನಾದಯನ್ ೧೯

---

ಪದ ರಾಗ ಯಮುನಾಕಲ್ಯಾಣಿ ಆದಿತಾಳ

ಎಂಥಾ ಬಲವಂತಾ ರೆಂಥಾ ಬಲವಂತ ಪ.
ಕುಂತೀಯ ನಂದನರೆಂಥಾ ಅ.

ಹರಿಯೂ ಪಾಂಚಜನ್ಯವೆಂಬ ಶಂಖವನೂದೆ
ಧುರದೊಳರ್ಜುನ ದೇವದತ್ತಾ ಶಂಖವನೂದಲೆಂಥಾ ೧

ಭೀಮ ಕರ್ಮ ವೃಕೋದರನು ಪೌಂಡ್ರವೆಂಬ
ಆ ಮಹಾ ಶಂಖವ ಧ್ವನಿಗೈಸುತಲಿರಲೆಂಥಾ ೨

ಕುಂತೀಯ ತನುಜ ಯುಧಿಷ್ಠಿರರಾಯನಾ
ನಂತವಿಜಯವೆಂಬ ಶಂಖಾವ ಪೂರೈಸಲೆಂಥಾ ೩

ನಕುಲ ಸುಘೋಷಾಖ್ಯ ದರ ಸಹದೇವನು
ಪ್ರಕಟಿತ ಮಣಿಪುಷ್ಪಕವೆಂಬೊದೂದಲು ೪

ಇಂದಿರಾಪತಿ ವಿಠ್ಠಲನ ದಯಪಾತ್ರರು
ನಿಂದಿರೆ ರಣದಲಿ ಗೆಲುವಾರ ಕಾಣೆ ೫ (೧೫-೧೯)

ಅಥವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦
ಹೃಷೀಕೇಶಂ ತದಾವಾಕ್ಯಮಿದಮಾಹ ಮಹೀಪತೇ

**ಅರ್ಜುನ ಉವಾಚ:—**

ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥ ೨೧

ಯಾವ ದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣ ಸಮುದ್ಯಮೇ ॥ ೨೨

ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ
ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥ ೨೩

---

ಸೀಸಪದ್ಯ:—

ಪರಮ ಧನುಸ್ಸುಳ್ಳ ಕಾಶಿಪ ಶಿಖಂಡಿಯಾ ಪರಮಹಾರಥಿಕ ವಹ್ನಿಜ ವಿರಾಟ ।
ಅರಿಗಳಿಗೆ ಸೋಲದಾ ವೀರಸಾತ್ಯಕಿ ತಥಾ ಸರಸ ದ್ರುಪದಾಖ್ಯ ದ್ರೌಪದಿಯ ಸುತರೂ ।
ಕೇಳು ರಾಯನೆ ಮಹಾಬಾಹು ಸೌಭದ್ರ ಮೊದಲಾದ ಸೈನ್ಯಸ್ಥ ವೀರರು ಸಮಸ್ತಾ ।
ರತಿಭಯಪ್ರದ ಶಂಖಗಳ ಬೇರೆಬೇರೊಮ್ಮೆ ಭರದಿ ಧ್ವನಿಗೈಸಲಾ ಘೋಷದಿಂದ ।
ದಿವಿ ಭೂಮಿ ಮಧ್ಯದೊಳ್ತುಂಬಿ ಪ್ರತಿಧ್ವನಿಯಿಂದ ಬೆದರಿಸದೆ ಬಿಚ್ಚಿಸಿತು ಅರಿವರ್ಗದ ।
ಅಥ ಉಭಯಪಕ್ಷಭಟರೊದಗಿ ಶಸ್ತ್ರಾಸ್ತ್ರಗಳ ಹತಿಯಿಂದ ಕದನ ಕಾರಂಭವಾಗೆ ।

ನೋಡಿ ಧೃತರಾಷ್ಟ್ರಜರ ರಣದಿ ಸ್ಥಿತರಾ
ಬಿಲ್ಲನೆತ್ತಿದ ಕಪಿವರಧ್ವಜ ಸುವೀರಾ (೧೭-೧೮-೧೯-೨೦)

ಸಂಜಯ ಉವಾಚ:—

ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ೨೪

---

ಪದ ಶ್ರೀರಾಗ ಆದಿತಾಳ

ಶ್ರುಣು ಭೂಪತೆ ಪಾಂಡವ ಮಧ್ಯಮ
ಕೃಷ್ಣನೊಳಾಡಿದ ವಾಕ್ಯವನಿಂದೂ ಪ.

ಚ್ಯುತಿ ರಹಿತನೆ ಅತಿಹಿತನೆ ಕೇಳು ಮ
ದ್ರಥ ಸೈನ್ಯುಭಯ ಮಧ್ಯದೊಳಿಂದೂ
ಅತಿವೇಗದಿ ಸ್ಥಾಪಿಸು ಯುದ್ಧಾಪೇ
ಕ್ಷಿತರಾಗಿಹರ ನೋಡೇನೆಂದೂ ೧

ಘೋರ ರಣೋದ್ಯೋಗವಲಿ ಸಿಂದು ನಾ
ನ್ಯಾರ ಕೂಡೆ ಕಾದಲಿ ಇಂದೂ
ಯಾರ್ಯಾರಿಲ್ಲಿ ಬಂದಿಹರೊ ಕುಮತಿ ಕುರು
ವೀರಗೆ ಪ್ರಿಯಮಾಡೇನೆಂದೂ ೨

ಇಂದಿರೇಶ ವಿಠಲನೆ ಕೇಳ್ಸಮರದಿ
ಸಿಂದು ಕಾದುವಾ ಭಟರನ್ನೂ
ಇಂದು ಶಂದಣವ ನಡಿಸಲ್ಲಿಗೆ ನಾ
ಛಂದದಿಂದ ನೋಡೇನಿನ್ನೂ ೩ (೨೦॥-೨೩)

ಗದ್ಯ:—

ಎಂದು ಗುಡಾಕೇಶನಿಂದುಕ್ತನಾಗಿ ದಶ
ಇಂದ್ರಿಯಂಗಳಿಗೊಡೆಯ ಶಂದಣವನಾಕ್ಷಣದಿ
ತಂದು ಸ್ಥಾಪಿಸಿ ಉಭಯ ಸೈನ್ಯಮಧ್ಯದೊಳು ಮು
ಕುಂದ ನ್ಶಿಗೆಂದನಾಗಾ (೨೪)

ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।
ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ೨೫

ತತ್ರಾಪಶ್ಯತ್ಸ್ಥಿತಾನ್ಪಾರ್ಥಃ ಪಿತೄನಥ ಪಿತಾಮಹಾನ್
ಆಚಾರ್ಯಾನ್ಮಾತುಲಾನ್ಭ್ರಾತೄನ್ಪುತ್ರಾನ್ಪೌತ್ರಾನ್ಸಖೀಂಸ್ತಥಾ ೨೬

ಶ್ವಶುರಾನ್ಸುಹೃದಶ್ಚೈವ ಸೇನಯೋರುಭಯೋರಪಿ
ತಾನ್ ಸಮೀಕ್ಷ್ಯ ಸಕೌನ್ತೇಯಃ ಸರ್ವಾನ್ಬನ್ಧೂನವಸ್ಥಿತಾನ್ ೨೭
ಕೃಪಯಾ ಪರಯಾವಿಷ್ಟೋ ವಿಷೀದನ್ನಿದ ಮಬ್ರವೀತ್

---

ಇಂದು ಭೀಷ್ಮ ದ್ರೋಣ ಪ್ರಮುಖರಾದೆಲ್ಲಾವ
ಸುಂಧರಾಧಿಪರಿಂದ ಸಮವೇತ ಸೈನ್ಯದಾ
ವೃಂದವನು ನೋಡೆನಲು ಅರ್ಜುನನು ರಣದೊಳಗೆ
ನಿಂದವರ ಕಂಡನಾಗಾ ೨೫

ಪದ ಅಟತಾಳ

ಪಿತೃ ಪಿತಾಮಹ ರಾಚಾರ್ಯರ ಮತ್ತು
ಪುತ್ರ ಪೌತ್ರರ ಭ್ರಾತೃಗಳನೂ
ಮಿತ್ರ ಮಾತುಳ ಶ್ವಶ್ರಾ ಸುಹೃದಾ ಬಂಧುಗಳನ್ನು
ತತ್ರ ಉಭಯ ಸೈನ್ಯಸ್ಥರನೂ ೧

ನೋಡಿ ಕೃಪಾವಿಷ್ಟನಾಗಿ ವಿಷಾದದಿ
ಆಡಿದ ಕೃಷ್ಣನೊಳ್ಹೀಗೆ
ನೋಡೆ ಯುದ್ಧದಿ ಬಂದು ಸ್ಥಿತರಾದ ಸ್ವಜನಾರ
ಪೀಡಿಸುವುದು ಗಾತ್ರದಾಗ ೨

ಕ್ಷಣಮಾತ್ರದಲಿ ಎನ್ನ ದೇಹದಿ ನಡಗ್ಹುಟ್ಟಿ
ವಣಗುತ್ತಿಹುದು ಮುಖವೀಗಾ
ತನು ರೋಮಾಂಚ ಹುಟ್ಟುತಿದೆ ಕೇಳು ಗಾಂಡೀವ
ಧನು ಜಾರುತಿದೆ ಕರದಾಗ ೩

ಅರ್ಜುನ ಉವಾಚ:—

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್। ೨೮
ಸೀದಂತಿ ಮಮಗಾತ್ರಾಣಿ ಮುಖಂಚ ಪರಿಶುಷ್ಯತಿ
ವೇಪಥುಶ್ಚ ಶರೀರೇ ಮೇ ರೋಮ ಹರ್ಷಶ್ಚ ಜಾಯತೇ ೨೯

ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ।
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ । ೩೦

ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ೩೧

ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।
ಕಿಂನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ ಜೀವಿತೇನವಾ ॥ ೩೨

---

ತಪಿಸುತಿಹುದು ತ್ವಗಿಂದ್ರಿಯ ನಿಲ್ಲುವದಕೆ ಶಕ್ತಿ
ವಿಪರೀತವಾಗಿದೆ ಮನವೂ
ಚಪಲ ವೃತ್ತಿಯಲಿ ಭ್ರಮಿಸುವದು ಯದುಕುಲಾ
ಧಿಪ ಕಾಂಬೆ ನೀಚಾ ಶಕುನವೂ ೪

ಬಂಧುಗಳನು ಯುದ್ಧದಲಿ ಇಂದೂ ಕೊಲ
ಲವರಿಂದ ಲೇಸನು ಕಾಣೆ ನಾನು
ಇಂದಿರಾಪತಿ ವಿಠಲನೆ ಜಯವಾವರು
ಎಂದೆಂದೂ ಬಯಸೆ ನಾನಿದನೂ ೫ (೨೬-೩೧)

ರಾಗ ಶಂಕರಾಭರಣ ಆದಿತಾಳ

ಏನು ಪ್ರಯೋಜನ ರಾಜ್ಯ ಸುಖಗಳಿಂದೇನು ರಾಜ್ಯ ಲಾಭದಿ ಕೃಷ್ಣ
ಏನು ಪ್ರಯೋಜನ ಭೋಗದಿಂದ ಬದುಕೇನು ಸ್ವಜನರನು ಸಂಹರಿಸಿ ಪ

ಆರನಿಮಿತ್ತೀಪ್ಸಿತವೊ ರಾಜ್ಯಸುಖ ಕ್ರೂರ ರಣದಿ ಅವರೇ ಬಂದು
ವೀರರಾಗಿ ನಿಂತಿಹರು ಪ್ರಾಣಧನ ಸೂರೆಮಾಡಿ ಬಿಟ್ಟೆಹರಿಂದೂ ೧

ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಸ್ಸುಖಾನಿಚ ।
ತ ಇಮೇಽವಸ್ಥಿತಾಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ ೩೩

ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।
ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ॥ ೩೪

ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।
ಅಪಿ ತ್ರೈಲೋಕ್ಯ ರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೆ ॥ ೩೫

---

ತಂದೆ ಪಿತಾಮಹ ರಾಚಾರ್ಯರು ಸಂಬಂಧಿ ಪುತ್ರ ಪೌತ್ರರನಾನಾ
ಬಂಧು ಬಳಗ ಮಾತುಳ ಶ್ಯಾಲಕರನಾ ವೃಂದದೊಳಗೆ ಕಾಣುತಲಿಹೆನಾ ೨

ಮೂರುಲೋಕ ರಾಜ್ಯಾರ್ಥವಾದರೂ ದೂರ ಮಾಳ್ಪೆ ಸ್ವಜನರ ಕೊಂದಾ
ದಾರುಣ ಕರ್ಮೇಚ್ಛೆಯ ಮಾಡೆನು ಮಧುವೈರಿಘ್ನತೋಪಿ ನಾನವರಿಂದಾ ೩

ಇಂಥಾದೀ ಭೂಮಿಯ ಮಾಡಲಿ ಏನೆಂತು ಧಾರ್ತರಾಷ್ಟ್ರರ ರಣದಿ
ಕಂತುಪಿತನೆ ಸಂಹರಿಸಲೆಮಗೆ ಹೇಳೆಂತು ಪ್ರೀತಿ ಆಹುದು ತ್ವರದೀ ೪

ಆತತಾಯಿಗಳಾದಿವರನು ಕೊಂದರೆ ನೀತಿಯೆ ನಮ್ಮನು ಪಾತಕವು
ಮಾತುಳಾಂತಕನೆ ಆಶ್ರೈಸದು ತಸ್ಮಾತು ಸಬಾಂಧವಜನ ರೋಧವು ೫

ಅಲ್ಲ ಅರ್ಹ ನಾನಿದಕೆ ಕೇಳು ಸಿರಿ ವಲ್ಲಭನೆ ಸ್ವಜನರ ಕೊಂದು
ಬಲ್ಲೆ ಹ್ಯಾಗೆ ಸುಖಿಸೇವು ಹೇಳು ನಾನೊಲ್ಲೆ ರಣವ ಬಿಡುವೆನೊ ಇಂದು ೬

ಕುಲಕ್ಷಯಕೃತ ದೋಷವು ಮಿತ್ರರನಾ ಕೊಲುವ ದ್ರೋಹ ಪಾತಕಗಳನೂ
ಜಲಜಾಕ್ಷನೆ ಕಾಣರು ಯದ್ಯಪಿವರು ಸಲೆಲೋಭದಿ ಉಪಹತಿಗಳನೂ ೭

ಇಂದಿರೇಶ ನಿಕಲನೆ ಕುಲಕ್ಷಯಕೃತ ಮುಂದೆಬಪ್ಪ ದೋಷಗಳನ್ನೂ
ಛಂದದಿ ಅರಿತೆಮ್ಮಿಂದೀ ಪಾಪಗಳಿಂದ ನಿವೃತ್ತಿಯು ಹ್ಯಾಗಹುದೋ ೮

(೩೨-೩೮)

ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।
ಪಾಪಮೇ ವಾಶ್ರಯೇದಸ್ಮಾನ್ಹತ್ವೈತಾನಾತತಾಯಿನಃ ॥ ೩೬

ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ಸ್ವಬಾಂಧವಾನ್ ।
ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ೩೭

ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।
ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ । ೩೮

ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।
ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ೩೯

ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ
ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ೪೦

---

## ಸು ಳಾ ದಿ

### ಧ್ರು ವ ತಾ ಳ

ಕುಲಕ್ಷಯಾವಾಗುತ್ತಿರೆ ಕೆಡುವಾದು ಸನಾತನಾ
ಕುಲಧರ್ಮಾ ಕೆಡಲು ಧರ್ಮಾ ಧರ್ಮಾಭಿವೃದ್ಧಿಯಲ್ಲಾ
ಕುಲಕಾಗುವಾದು ಮತ್ತೆ ಬಲವಾಗಾಲು ಅಧರ್ಮ
ಕುಲಸ್ತ್ರೀಯಾರನುದಿನ ದೂಷಿಸಿಕೊಳುವಾರೆಲ್ಲಾ, ಲಲನೇಯಾರಿಂತೂ
ದುಷ್ಟಾರಾಗುತ್ತಿರಾಲು ವರ್ಣಗಳು ಕೆಟ್ಟು ಸಾಂಕರ್ಯವಾಹುದು
ಇಂದಿರಾಪತಿ ವಿಠಲರಾಯಾ ಕೇಳೋ ಯನ್ನಮಲವಾದಾ ಬಿನ್ನಪವಾ

### ಅ ಟ ತಾ ಳ

ಜಾತಿಸಂಕರ ನರಕಕ್ಕೆ ದ್ವಾರಾವೆಂಬೂವ ನೀತಿ ನಾ ಬಲ್ಲೆ ಕುಲ
ಘ್ನಾರಾ ಕುಲದಲ್ಲಿ ಜಾತಾರಾದವರು ತತ್ಪಿತೃಗಾಳು ನರಕದಿ ಪಾ
ತಾರಾಹಾರು ಲುಪ್ತ ಪಿಂಡಾಂಬುಕ್ರಿಯರಾಗಿ ಯಾತನೆ ಬಡುವಾರು
ಇಂದಿರಾಪತಿ ವಿಠಲಾ ತಪೋನಿಧಿಗಳೊಡೆಯ ಕೇಳೊ ಬಿನ್ನಪವಾ ೨

ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ೪೧

ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ
ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ೪೨

ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ೪೩

---

ಆದಿತಾಳ

ಕುಲಸಂಕರಕಾರಕ ಈ ದೋಷಂಗಳ ಆಚರಿಪುದರಿಂದ
ಕುಲಘ್ನರಾಗಾಳ ಶಾಶ್ವತ ಕುಲಧರ್ಮ ಕೆಡುವುದಿದು ಕುಲಧರ್ಮಗಳು
ಭ್ರಷ್ಟಾಗೈಸಿದ ಬಲು ಪಾಪಿಷ್ಟ ಮನುಜರಿಗೆ ನರ್ಕದಿ ಕೆಲಕಾಲದಿ
ವಾಸವು ಆಗುವದೆಂಧ್ಹಲವು ಶಾಸ್ತ್ರ ನಿಯಮವ ಕೇಳಿಹೆವೋ ಜಲ
ಜಾಕ್ಷನೆ ಇಂದಿರೇಪತಿ ವಿಠಲ ಬಲು ಪಾಪಕೆ ಮನವೆರಗದೋ ಲಾಲಿಸೊ ೩೧

ಮಠ್ಯತಾಳ

ಕಟಂ ಕಠ ಮಹಾ ಪಾಪವ ಮಾಡಲು ವ್ಯವಸಿತನಾಗಿ ಹಟಮಾಡೀ
ಯದ್ರಾಜ್ಯದ ಸುಖಲೋಭದಿ ನಾ ಸ್ವಜನರ ಕಟಕವ ಕೊಲ್ಲಲು
ಉದ್ಯೋಗಿಸಿದೆ ನಹೋ - ಈ ಪರಿ ಕಠಿಣತ್ವವು ಎನಗ್ಯಾತಕೆ
[ ಸಂಧಿಸಿತೋ
ಇಂದಿರೇಪತಿ ವಿಠಲನೆ ಪಲ್ಲೆನೋ ರಣ ನಡಿ ಹಿಂದಕೆ ಮುರಳಿ ೪೧

ತ್ರಿಪುಟತಾಳ

ರಣವಲಿ ದುರ್ಯೋಧನಾದಿಗಾಶಸ್ತ್ರ ಧಾರಣಮಾಡಿದವರಿಂದೆ
ಅಸ್ತ್ರ ಪಿಡಿಯದಾ ಎನ್ನನು ಪ್ರತೀಕಾರಾವಾ ಮಾಡದಾವಾ
ನಾ ಬಂದೂ ಹನನ ಮಾಡಲು ಇಂದಿರೇಶ ವಿಠಲ ರಾಯಾ
ಎನಗಾದೂ ಕ್ಷೇಮವಾಹಾದು ಎಂದಾ ಪಾರ್ಥನೊಚನ ಕೇಳೊ
ಧೃತರಾಷ್ಟ್ರ ಮನುಜಾಧಿಪನೆ ಇಂದೂ (೩೯-೪೬)

ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।
ನರಕೇ ನಿಯತಂ ವಾಸೋ ಭವತೀತ್ಯನು ಶುಶ್ರುಮ ೪೪

ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।
ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ೪೫

ಯದಿ ಮಾಮಪ್ರತೀಕಾರ ಮಶಸ್ತ್ರಂ ಶಸ್ತ್ರ ಪಾಣಯಃ ।
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬

ಸಂಜಯ ಉವಾಚ:—

ಏವ ಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।
ವಿಸೃಜ್ಯ ಸಶರಂ ಚಾಪಂ ಶೋಕ ಸಂವಿಗ್ನ ಮಾನಸಃ ೪೭

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ
**ಅರ್ಜುನವಿಷಾದಯೋಗೋನಾಮ**
ಪ್ರಥಮೋಽಧ್ಯಾಯಃ

---

ಎಂದು ನುಡಿದು ಅರ್ಜುನ ರಣದಲಿ ಖತಿ
ಯಿಂದ ಬಳಲಿದಂಥಾ ಮನದೀ
ಅಂದು ಸಚಾಪಾಸ್ತ್ರವನೆ ಬಿಟ್ಟು ವ
ಲ್ಲೆಂದು ರಣವ ಕುಳಿತನು ರಥದೀ (೪೭)

**ಇತಿ** ಶ್ರೀಮದ್ರಾಮಚಂದ್ರಾಭಿಧತನೂಜ ಶೇಷನಾಮಾಖ್ಯ
ವಿರಚಿತ **"ಗೀತಾರಂಜನಾ"**ಖ್ಯ ಗ್ರಂಥೇ
**ಅರ್ಜುನವಿಷಾದಯೋಗೋನಾಮ**
ಪ್ರಥಮೋಽಧ್ಯಾಯಃ ಸಮಾಪ್ತಃ



ಹರಿಃ ಓಂ

# ಎರಡನೆಯ ಅಧ್ಯಾಯ

ಸಂಜಯ ಉವಾಚ:—

ತಂ ತಥಾ ಕೃಪಯಾಽಽವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।
ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ೧

ಶ್ರೀ ಭಗವಾನುವಾಚ—

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ ।
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ೨
ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ೩

---

ಸಂಜಯಃ ॥ ಅಷ್ಟಪದೀಗದ್ಯಾ—

ಕೃಪೆಯಿಂದ ಆವಿಷ್ಟ ಕಣ್ಣಿನಲಿ ಜಲಪೂರ್ಣ
ಅಪರಿಮಿತ ವ್ಯಾಕುಲೇಕ್ಷಣ ದುಃಖದಿಂದಿರುವ
ಚಪಲಮತಿಯಾದ ಅರ್ಜುನನ ಕುರಿತೀ ವಾಕ್ಯ
ಕೃಪಣ ವತ್ಸಲ ನುಡಿದನು ।

ಅಪಕೀರ್ತಿಕರ ಅಸಜ್ಜನರಿಂದ ಸೇವಿತದ
ಕುಪಥ ವೆತ್ತಣದೊ ನಿನ್ನನು ವಿಷಮ ಕಾಲದಲಿ
ಅಪವರ್ಗ ಕೊಡದ ಈ ಕಶ್ಮಲವು ಎಲ್ಲಿಂದ
ಅಪಹಾಸ ಕೊಡಗಿತೆಂದಾ (೧-೨)

ಷಟ್ಪದೀ ತ್ರಿಪುಟತಾಳ

ಷಂಢತನದ ನೀ ನೈವದಿರು ಅದು
ಕಂಡುದಿಲ್ಲವೊ ನಿನ್ನೊಳಗೆ ಹೇ
ಪಾಂಡವ ಪರಂತಪನೆ ಕುತ್ಸಿತ ಮನದ ಬಡತನವಾ

ಅರ್ಜುನ ಉವಾಚ:—

ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ
ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ೪

ಗುರೂನಹತ್ವಾ ಹಿ ಮಹಾನುಭಾವಾನ್
ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ
ಹತ್ವಾರ್ಥಕಾಮಾಂಸ್ತು ಗುರೂನಿಹೈವ
ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ೫

ನ ಚೈತದ್ವಿದ್ಮಃ ಕತರನ್ನೋ ಗರೀಯೋ
ಯದ್ವಾ ಜಯೇಮ ಯದಿ ವಾ ನೋ ಜಯೇಯುಃ
ಯಾನೇವ ಹತ್ವಾ ನ ಜಿಜೀವಿಷಾಮಃ
ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ೬

---

ಖಂಡಿಸೇಳು ಮಹಾರಣದಿ ಧನು
ಗೊಂಡು ನಿಂದಿರು ಯುದ್ಧದಲಿ ಬಹು
ಮಂಡಲಾಧಿಪರನ್ನೆ ಜಯಿಸೈ ಎಂದನಸುರಾರಿ (೩)

ಅರ್ಥ:—

ಹ್ಯಾಗೆ ಭೀಷ್ಮದ್ರೋಣಾದಿಗಳನ ರಣದಾಗ ನಾನು ಬಾಣಗಳಿಂದಾ
ನಾಗಶಯನ ಪೂಜಾರ್ಹರು ಪ್ರತಿಪ್ರಯೋಗ ಮಾಡಲೀವಲ್ಲಿಂದಾ ೧

ಗುರುಗಳನೆ ಕೊಂದರ್ಥ ಕಾಮರಾದವರ ರಕ್ತದಿಂ ತೊಡೆದಂಥಾ
ಪರಮ ಭೋಗಗಳ ಭೋಗಿಸಲೀ ಹ್ಯಾಗರುಹು ಹೀಗೆ ಮಾಳ್ಪುದಕಿಂತಾ ೨

ಧುರದಲಿ ಮಹಾನುಭಾವರಾದ ಈ ಗುರುಗಳನ್ನೆ ಕೊಲ್ಲದೆ ಇರದೀ
ತಿರಿದಾವರು ನಾ ಉಣ್ಣಲು ಶ್ರೇಯಸ್ಕರವಿದೆಂದು ತಿಳಿದಿಹೆ ಮನದೀ || ೩

ಅವರು ನಮ್ಮನೆ ಜಯಿಸುವರೋ ಯದಿ ಅವರನ ನಾವೇ ಜಯಿಸುವೆವೋ
ಬವರದಲ್ಲಿ ಇದರೊಳಗಾವುದು ಸಾಧನವೆ ಗರೀಯವರಿಯದಿಹೆವೊ ೪

ಕಾರ್ಪಣ್ಯದೋಷೋಪಹತಸ್ವಭಾವಃ
ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ।
ಯಚ್ಛ್ರೇಯಸ್ಸ್ಯಾನ್ನಿಶ್ಚಿತಂ ಬ್ರೂಹಿತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ । ೭

ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ ।
ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।
ಅವಾಪ್ಯ ಭೂಮಾವಸಪತ್ನಮೃದ್ಧಂ
ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ । ೮

---

ಆರ ಕೊಂದು ಜೀವಿಸೆವೊ ಆವರೆ ಮಾರಪಿತನೆ ಸಮ್ಮುಖವಲ್ಲಿ ।
ಶೂರರಾದ ದುರ್ಯೋಧನಾದಿಗಳು ಕ್ರೂರರಾಗಿ ನಿಂತಿಹರಿಲ್ಲೇ ೫

(೪-೫-೬)

ಪದ ಅಟತಾಳ

ಮುರವೈರಿ ಕೇಳೊ ಬಿನ್ನಪವಾ, ನಿನ್ನಾ
ಮೊರೆಹೊಕ್ಕೆ ಕರುಣದಿ ತೋರು ಸುಪಥವಾ ಪ

ಕೃಪಣ ದೋಷಗಳಿಂದ ಬಹಳ, ಕೇಳು
ಉಪಹತವಾದ ಸ್ವಭಾವವನುಳ್ಳಾ
ಸುಪಥವರಿಯದ ಮೂಢ ಮರುಳ - ಮತಿ
ಕೃಪೆಮಾಡಿ ಹೇಳು ಕೇಳುವೆ ನಿನ್ನ ಮರುಳಾ ೧

ಯಾತರಿಂದಲಿ ಮುಕ್ತಿಯಹುದೊ
ಅಂಥಾ ನೀತಿ ನಿಶ್ಚೈಸೆನ್ನ ಶಿಕ್ಷಿಸಬಹುದೋ
ತಾತ ನಿನಗೆ ಶಿಷ್ಯನಹುದೋ ಕೃಷ್ಣಾ
ಪಾತಕರನು ರಕ್ಷಿಸುವುದಿದು ಬಿರುದೋ ೨

ಸಂಜಯ ಉವಾಚ:—

ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ
ನಯೋತ್ಸ್ಯ ಇತಿ ಗೋವಿಂದ ಮುಕ್ತ್ವಾ ತೂಷ್ಣೀಂ ಬಭೂವಹ ೯

ತಮುವಾಚಹೃಷೀಕೇಶಂ ಪ್ರಹಸನ್ನಿವ ಭಾರತ
ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ೧೦

---

ಧರೆಯಲ್ಲಿ ಪ್ರತಿ ಶತ್ರು ರಹಿತ, ವಾದಾ
ಪರಮ ರಾಜ್ಯಕೆ ನೃಪನಾಗಲು ನಿರುತಾ
ಸುರರಿಗೊಡೆಯ ನಾಗುವಂಥಾ, ಪದ
ದೊರಕಿ ಐದಿದರು ಅನಿತ್ಯವೊ ತಾತಾ ೩

ಇಂದ್ರಿಯಂಗಳ ಒಣಗಿಸುವ, ಶೋಕಾ
ವೃಂದವ ಕೆಡಿಸೂವವನೆ ಕಾಣೆ ದೇವಾ
ಬೃಂದಾರಕರಿಗೊರವೀವಾ, ಪ್ರಭು
ಇಂದಿರೇಪತಿ ವಿಠಲನೆ ಸುಪ್ರಭಾವಾ ೪

(೭ ೮)

ಷಟ್ಪದೀ ತ್ರಿಪುಟತಾಳ

ಹೀಗೆ ನುಡಿವರ್ಜುನನು ಕೃಷ್ಣನೊ
ಳೀಗ ಧೃತರಾಷ್ಟ್ರಾಯ ಕೇಳ್ಕೈ
ಆಗದ್ಯುದ್ಧವು ಮಾಡೆನೆನುತಲಿ ನುಡಿದು ಸುಮ್ಮನಿರೆ
ನಾಗಶಯನನು ಮುಗುಳುನಗೆಯಿಂ
ದಾಗ ಉಭಯಾನೀಕ ಮಧ್ಯದಿ
ಹೀಗೆ ದುಃಖಿಸುವನನ್ನು ಕುರಿತೀ ವಾಕ್ಯವನು ನುಡಿದಾ (೯ ೧೦)

ಶ್ರೀ ಭಗವಾನುವಾಚ:—

ಅಶೋಚ್ಯಾ ನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚಭಾಷಸೇ
ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ೧೧

ನ ತ್ವೇವಾಹಂ ಜಾತುನಾಸಂ ನ ತ್ವಂ ನೇಮೇ ಜನಾಧಿಪಾಃ
ನ ಚೈವ ನ ಭವಿಷ್ಯಾಮಸ್ಸರ್ವೇ ವಯಮತಃ ಪರಮ್ ೧೨

---

ಶೋಕಿಸಲನರ್ಹರ ಕುರಿತು ನೀ
ಶೋಕಿಸುತ ಸ್ವಕಪೋಲಕಲ್ಪಿತ
ವಾಕ್ಸತ್ಯವೆಂದೆಂದು ಆಡುವೆ ಕೇಳು ಪಂಡಿತರು
ಲೋಕದಲಿ ಜೀವಿತರಿಗೋಸುಗ
ಶೋಕಪಡರೆಂತೆಂತು ಪರಮ ವಿ
ವೇಕಿಗಳು ಸತ್ತವರಿಗಳ ರಜ್ಞಾನಿಗಳ ಪೊರತು ೧೧

ಹಿಂದೆ ನಾನಿಲ್ಲೆಂಬುದಿಲ್ಲವೊ
ಹಿಂದೆ ನೀನಿಲ್ಲೆಂಬುದಿಲ್ಲವೊ
ಹಿಂದೆ ಇಲ್ಲೆಂಬುವುದು ಇಲ್ಲವೊ ಈ ಜನಾಧಿಪರು
ಮುಂದೆ ನಾವುಗಳಿಲ್ಲ ಇರೆವೆಂ
ತೆಂಬುದಿಲ್ಲವೊ ಸರ್ವಕಾಲದಿ
ಕುಂದವಲೆ ಶಾಶ್ವತರು ಸರ್ವರು ಎಂದನಸುರಾರಿ ೧೨

ಪದ

ದೇಹದೇಹಾ ಜೀವ ಭೇದಜ್ಞಾನ ಕೇಳೊ ಅರ್ಜುನಾ
ಮುಕ್ತಿಗಿದು ಸೋಪಾನ ಪ

ಶ್ಲೋಕ: —

ದೇಹಾನಿತ್ಯವೊ ಜೀವವರ್ಗರು ನಿತ್ಯಾ
ವಾಸುದೇವನು ಸರ್ವ ತಂತ್ರ ಸ್ವತಂತ್ರಾ
ನಿತ್ಯಾವಲ್ಲದಾ ದೇಹದುದ್ದಿಶ್ಯ ಶೋಕ
ವ್ಯರ್ಥ ಮಾಡುವಾ ಯಾಕೆ ನಿತ್ಯರ್ಗೆ ಕಿಮುತಾ

ದೇಹಿನೋಽಸ್ಮಿನ್ ಯಥಾದೇಹೇ ಕೌಮಾರಂ ಯೌವನಂ ಜರಾ
ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನಮುಹ್ಯತಿ ೧೩

ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣ ಸುಖದುಃಖದಾಃ
ಆಗಮಾಪಾಯಿನೋಽನಿತ್ಯಾಸ್ತಾಂ ಸ್ತಿತಿಕ್ಷಸ್ವ ಭಾರತ ೧೪

---

ಪದ:—

ಒಂದೆ ದೇಹಕೆ ಬಾಲ್ಯ ಯೌವನಾ, ವಾರ್ಧಿಕವು ನಾನಾ
ವಸ್ಥೆ ಬರಲು ಚೇತನಾ
ಒಂದೆ ಪ್ರಕಾರದಿ ಇರುತಿಹಾ ನ್ಯಾಯಂಗೋ ಹಾಂಗಿಹಾ
ದಲ್ಲಿ ಬಹ ಬಹು ದೇಹಾ
ವೆಂದು ತಿಳಿದು ಇದ್ದಾರಾದರೂ ದೇಹ ಪೋದರೂ
ಮೋಹಪಡರು ಧೀಯುತರೂ
ಮುಂದೆ ಇವರ ಕಾಣೆನೆಂತೆಂಗೂ ಶೋಕಿಸುವ್ಯ ಇಂದೂ
ಆದು ಯುಕ್ತವಲ್ಲೆಂದೂ ೧೩

ಶ್ಲೋಕ:—

*ಮಾತ್ರಾಸ್ಪರ್ಶಾದಿ ಪ್ರಕೃತಿ ಸಂಬಂಧ ನಿತ್ಯಾ
ಶೀತೋಷ್ಣಾದಿ ಈ ದ್ವಂದ್ವ ಸುಖದುಃಖ ಭೋಗಾ
ಬಂದೂ ಹೋಗುವಾ ಬಾಹ್ಯವಾದೆಂದು ತಿಳಿದೂ
ಕುಂತೀ ಪುತ್ರನೆ †ಸೈರಿಸ್ಯೆ ಇವುಗಳನ್ನು ೧೪

---

*"ಕೇವಲ ವಿಷಯ ಸಂಬಂಧಗಳೇ ಸುಖದುಃಖವನ್ನು ಕೊಡತಕ್ಕುವಲ್ಲ. ಅವು ನಾನು-ನನ್ನದು ಎಂಬ ಅಭಿಮಾನದೊಂದಿಗೆ ಸೇರಿದರಲ್ಲದೆ ತಾವೇ ಸುಖದುಃಖಗಳನ್ನು ಕೊಡಲಾರವು. ಏಕೆಂದರೆ, ಅವು ಸರ್ವದಾ ಒಂದೇ ಸಮನಾಗಿ ಸುಖದುಃಖಗಳನ್ನು ಕೊಡುವುದಿಲ್ಲ ಆದುದರಿಂದ ಅಭಿಮಾನ ತ್ಯಾಗಮಾಡಿ ದುಃಖವುಂಟಾಗದಂತೆ ಮಾಡಿಕೋ!"

†ಅಭಿಮಾನತ್ಯಾಗಮಾಡಿ ಸುಖದುಃಖಗಳನ್ನು ಹುಟ್ಟಿಸದಿರುವಂತೆ ಮಾಡಿಕೋ.

ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ
ಸಮದುಃಖ ಸುಖಂ ಧೀರಂ ಸೋಽಮೃತತ್ವಾಯಕಲ್ಪತೇ ೧೫

---

ಪದ—

* ಈ ವಿಧದಲಿ ದ್ವಂದ್ವ ಬಾಹ್ಯಾವೊ, ಕೇಳನಿತ್ಯಾವೊ
ಎಂಬೊ ವಿಷಯಾಕೆ ಸಮವೊ
ಆವ ಬಲ್ಲನೊ ಅಂಥ ಧೀರನ್ನಾ, ಬಡಿಸದು ಬನ್ನಾ
ದುಃಖ ಸುಖಗಳು ಮಾನ್ಯಾ
ಪಾವನನವನೆ ಮುಕ್ತಿಗೆ ಪಾತ್ರಾ, ದುರ್ಲಭನೊ ಗೋತ್ರಾ
ದೊಳು ಪರಮ ಪವಿತ್ರಾ
ಯಾವನಿಚ್ಛಿಸದೆ ವಿಷಯದ ಪಾರಾ, ಕಂಡವನೆ ಧೀರಾ
ಕೇಳು ಕುಂತೀಕುಮಾರಾ ೧೫

---

*"ಎಲೈ ಸ್ವಾಮಿಯೇ, ಯುದ್ಧಮಾಡಿತನ್ನಿಮಿತ್ತಕವಾದ ದುಃಖವನ್ನು ಅಭಿಮಾನತ್ಯಾಗದಿಂದ ಪರಿಹರಿಸಿಕೊಳ್ಳೆಂದೇಕೆ ಹೇಳುತ್ತೀಯೆ? ಯುದ್ಧವನ್ನೇ ಮಾಡದಿದ್ದರೆ ಪುನಃ ದುಃಖ ಪ್ರಸಕ್ತಿಯೇ ಇಲ್ಲವಾದುದರಿಂದ ನಾನು ಯುದ್ಧಮಾಡುವುದಿಲ್ಲವೆನ್ನಬಹುದಷ್ಟೆ! ಈ ಪ್ರಶ್ನೆಗೆ ಅಭಿಮಾನ ಪರಿತ್ಯಾಗದಿಂದ ದುಃಖನಿವೃತ್ತಿ ಮಾತ್ರವೇ ಫಲವಲ್ಲ - ಮತ್ತು ಪರಮ ಪುರುಷಾರ್ಥವೂ ಆಗುತ್ತದೆಂದು ಭಗವಂತನು ಹೇಳುತ್ತಾನೆ—ಎಲೈ ಪುರುಷಶ್ರೇಷ್ಠನಾದ ಅರ್ಜುನನೆ! ದುಃಖವು ಹೇಗೆ ನಿತ್ಯವಲ್ಲವೋ ಪರಮ ಶ್ರೇಯಸ್ಸಾಧನೆಯೂ ಅಲ್ಲವೋ ಮತ್ತು ನಮ್ಮ ಇಚ್ಛಾಪ್ರಯತ್ನದಿಂದ ಉಂಟಾಗುವುದಿಲ್ಲವೋ ಅದರಂತೆ ವಿಷಯ ಸುಖವೂ ನಿತ್ಯವಲ್ಲ, ಮೋಕ್ಷಸಾಧನವೂ ಅಲ್ಲ, ಜೀವನ ಅಧೀನವೂ ಅಲ್ಲ ಎಂಬ ತತ್ವವನ್ನು ತಿಳಿದು ಸುಖದುಃಖಗಳು ಪ್ರಾಪ್ತವಾದಾಗ್ಯೂ ತತ್ಕಾರ್ಯವಾದ ಚಿತ್ತವಿಕಾರವನ್ನು ಅಡಗಿಸುವ ಪ್ರಯತ್ನವುಳ್ಳವನು ಸಮದುಃಖಸುಖಗಳುಳ್ಳವನು.

"ಇಂತಹ ಬ್ರಹ್ಮಜ್ಞಾನಿಯೂ ಜಾಗ್ರದವಸ್ಥಾವಂತನೂ ಆದ ಯಾವ ಮನುಷ್ಯನಿಗೆ ಈ ವಿಷಯೇಂದ್ರಿಯ ಸನ್ನಿಕರ್ಷಗಳು ದುಃಖವನ್ನು ಉಂಟುಮಾಡುವುದಿಲ್ಲವೋ ಆತನು ಮುಕ್ತನಾಗುತ್ತಾನೆ."

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ
ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ೧೬
ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ೧೭

---

ಶ್ಲೋಕ:—

ಅಸತ್ತೆಂದರೆ ಪಾಪಕಾರ್ಯವದರಿಂ ಸುಖಲೇಶವೆಂತಿಲ್ಲವೊ
ಸತ್ತ-ವೆಂದರೆ ಪುಣ್ಯಕಾರ್ಯವದರಿಂ ದುಃಖಂಗಳುಂ ಬಾರವು
ಯುದ್ಧವೆಂಬುದು ವರ್ಣಧರ್ಮವದರಿಂ ಪಾಪಂಸಿನಗಂಟದ್ದೈ
ಬುದ್ಧಿವಂತನೆ ವಿಹಿತ ಕರ್ಮವಿದು ಕೇಳ್ಸುಖ ಹೇತುತಾನಪ್ಪುದೈ ೧೬

ಪದ್ಯ:—

ಎರಡು ಪಕ್ಷಗಳನ್ನು ಶೋಧಿಸಿ, ತತ್ವ ಸಾಧಿಸಿ
ಹೀಗೆಂದೂ ನಿರ್ಣೈಸಿ
ಪರಮ ತತ್ವಾವಾದಿ ಜನರಿಂದಾ ಕಂಡಿಹುದರಿಂದ
ಸಾಕ್ಷಿ ಸಿದ್ಧಾದರಿಂದಾ
ಸ್ಥಿರರೊ ಜೀವರು ದುಃಖಿಸುವುದ್ಯಾಕೆ ದೇಹ ಕಳಬೇಕೇ
ಆಯುಕ್ತವು ಅದು ಯಾಕೇ
ಮರಳಿ ಬಂದು ಬಂದು ಹೋಗಲು - ಅಳುವುದು ಕೇಳು
ಯುಕ್ತವಲ್ಲವೊ ಕೇಳು

ಶ್ಲೋಕ:—

ಯಾವಾ ದೇವರಿಂದೀ ಜಗವೆಲ್ಲ ಪೂರ್ಣ
ವಾಗೀ ಇಪ್ಪದೋ ಅವನ ಪ್ರತಿಬಿಂಬ ನಾಶಾ।
ಎಂದೀಗಾಗದೂ ತಿಳಿಯೊ ಕೇಡಿಲ್ಲದವರಾ
ಕೊಲ್ಲಾಲೊಬ್ಬನೂ ಅರ್ಹನಲ್ಲವೊ ಪಾರ್ಥ ೧೭

ಅಂತವಂತ ಇಮೇ ದೇಹಾ ನಿತ್ಯ ಸ್ಯೋಕ್ತಾ ಶ್ಶರೀರಿಣಃ
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ೧೮

ಯಯೇನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್
ಉಭೌತೌ ನವಿಜಾನೀತೋ ನಾಯಂ ಹಂತಿ ನ ಹನ್ಯತೇ ೧೯

ನ ಜಾಯತೇ ಮ್ರಿಯ ತೇವಾ ಕದಾಚಿ
ನ್ನಾಯಂ ಭೂತಾ ಭವಿತಾವಾನ ಭೂಯಃ
ಅಜೋ ನಿತ್ಯ ಶ್ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ ೨೦

---

ಪದ:—

ನಾಶಾವಿಲ್ಲದ ಅಪ್ರಮೇಯಗೆ ದೇಹಧಾರಿಗೆ
ನಿತ್ಯನಾದ ಜೀವನಿಗೆ
ಈ ಶರೀರವೆ ಅಂತವಾಹದೂ ಮತ್ತೂ ಬಾಹದು ಎಂದ್ಹೇ
ಳಿಸಿಕೊಳ್ಳುತಿಹುದು
ಲೇಶವಾದರು ಕೆಡದವನನ್ನು ಕೊಂದೆನೆಂಬನು
ಕೊಂದಾನಲ್ಲ ಎಂಬುವನೂ
ಈ ಸುಮಾರ್ಗವ ನರಿಯದವನು ಕೇಳು ಜೀವರು
ಕೊಲ್ಲಾರು ಕೊಲಿಸಿಕೊಳರೂ || ೧೮

ಶ್ಲೋಕ:—

ಎಂದೀಗಾದರೂ ಹುಟ್ಟುವನಲ್ಲ ಜೀವಾ
ಸಾಯಾನೆಂದಿಗೂ ಹುಟ್ಟಿದಾಗ್ಯಾರು ದೇಹಾ
ಪುಟ್ಟಾ, ದೇಹವು ನಾಶವಾದಾಗ್ಯು ಜೀವಾ
ಸಾಯಾ ನಿತ್ಯಾಜಾನ ಪ್ರತಿಬಿಂಬ ನೀತ ೧೯

ಪದ:—

ಜನನರಹಿತ ಕೆಡದವನೆಂದೂ ನಿತ್ಯನಹುದೆಂದೂ
ನಾಶರಹಿತನೆಂತೆಂದೂ

ವೇದಾವಿನಾಶಿನಂ ನಿತ್ಯಂ ಯಏನಮಜಮವ್ಯಯಂ
ಕಥಂ ಸಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಂ ೨೧

ವಾಸಾಂಸಿ ಜೀರ್ಣಾನಿ ಯಥಾವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ
ತಥಾ ಶರೀರಾಣಿ ವಿಹಾಯ ಜೀರ್ಣಾ
ನ್ಯನ್ಯಾನಿ ಸಂ ಯಾತಿ ನವಾನಿ ದೇಹೀ ೨೨

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ
ನ ಚೈನಂ ಕ್ಲೇದಯಂತ್ಯಾಪೋ ನಶೋಷಯತಿ ಮಾರುತಃ ೨೩

ಅಚ್ಛೇದ್ಯೋಽಯ ಮದಾಹ್ಯೋಽಯ ಮಕ್ಲೇದ್ಯೋಽಶೋಷ್ಯ ಏವಚ
ನಿತ್ಯಸ್ಸರ್ವಗತಃ ಸ್ಥಾಣು ರಚಲೋಽಯಂ ಸನಾತನಃ ೨೪

---

ಮನುಜನಾವನು ಬಲ್ಲನೊ ಆತ ಯಾರಿಗೆ ಘಾತಾ
ಮಾಡಿಸುವನ್ಯಾರಿಗೆ ಪಾರ್ಥಾ
ಹನನ ಮಾಡುವನ್ಯಾರನು ಹೀಗೆ ತಿಳಿದ್ವಳದಾಗೆ
ವಸ್ತ್ರಾಗಳು ಬಿಟ್ಟು ಹ್ಯಾಗೆ
ಮನುಜನು ಹೊಸವಸ್ತ್ರ ಹೊದೆವನೋ ಹಾಗೆ ಪುರಾತನೂ
ಬಿಟ್ಟು ಗ್ರಹಿಪ ಹೊಸತನೂ ॥ ೨೧-೨೨

ಶ್ಲೋಕ:—

ಶಸ್ತ್ರಾಗಳು ಈ ಜೀವನಾ ಛೇದಿಸದು ಕೇಳಗ್ನಿ
ಆತ್ಮನ ಸುಡದು ತೋಯಿಸದು ಉದಕಾ
ವಾಯೂ ಜೀವನಾ ಒಣಗಿಸಾನಾದ್ದರಿಂದ
ಛೇದ್ಯಾದಹ್ಯನೊ ರುಷ್ಕತೋಯೂಷನಲ್ಲ ೨೩

ಅವ್ಯಕ್ತೋಽಯಮಚಿಂತ್ಯೋಽಯ ಮವಿಕಾರ್ಯೋಽಯ ಮುಚ್ಯತೇ
ತಸ್ಮಾದೇವಂ ವಿದಿತ್ವೈವಂ ನಾನುಶೋಚಿತುಮರ್ಹಸಿ ೨೫

ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್
ತಥಾಪಿ ತಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ೨೬

ಜಾತಸ್ಯ ಹಿ ಧ್ರುವೋಮೃತ್ಯುರ್ಧ್ರುವಂ ಜನ್ಮ ಮೃತಸ್ಯಚ
ತಸ್ಮಾದಪರಿಹಾರ್ಯೇಽರ್ಥೇ ನತ್ವಂ ಶೋಚಿತುಮರ್ಹಸಿ ೨೭

---

ಪದ:—

ಸರ್ವವ್ಯಾಪಿ ಪರಬ್ರಹ್ಮನ - ನಿತ್ಯಾಧೀನನೂ
ಅದರಿಂದೆಂದೂ ಚಲಿಸನೂ
ಅವ್ಯಕ್ತಾಚಿಂತ್ಯ ವಿಕಾರನೂ ಕೇಳು ಬ್ರಹ್ಮನೂ
ಹೀಗ್ಹೇಳಿಸಿಕೊಳ್ಳುತಿಹನೂ
ಸವ್ಯಸಾಚಿಯೆ ಇಂಥಾ ಬ್ರಹ್ಮನ ವೂಜೆಯೆಂದಿದ
ತಿಳಿದ್ಹಿಡಿಯಿನ್ನು ಬಾಣಾ
ಭಾವ್ಯವಲ್ಲಿವೊ ಶೋಕ ಮಾಡಲು ಅರ್ಹನಾಗಲು
ಬೇಡ ಕೇಳು ರಣವೊಳು ೨೪-೨೫

ಶ್ಲೋಕ:—

ಮತ್ತೂ ಜೀವಯಲ್ಲಾಗಲೂ ಜಾತನೆಂದೂ
ಭಾರಿಭಾರಿಗೂ ಸಾಯುವಾನೆಂದು ಅಳುವೆ
ನೆಂದೂ ತಿಳಿಯುವ್ಯಾ ಯುಕ್ತವಲ್ಲೋ ತಥಾಪಿ
ಅರ್ಹನಲ್ಲವೊ ದುಃಖಿಸೇ ಪಾರ್ಥ ನೀನೂ ೨೬

ಪದ:—

ಜನಿಸಿದವಗೆ ಮೃತ್ಯು ಸಿದ್ಧವೋ ಇದು ಬದ್ಧವೋ
ಧ್ರುವ ಮೃತಗೆ ಜನನವೋ
ಘನ ಯತ್ನದಲಿ ಪರಿಹರಿಸಲೂ ಬಾರದಿದು ಕೇಳು
ತಸ್ಮಾದಿದಕೆ ದುಃಖಿಸಲೂ ।

ಅವ್ಯಕ್ತಾದೀನಿ ಭೂತಾನಿ ವ್ಯಕ್ತ ಮಧ್ಯಾನಿ ಭಾರತ
ಅವ್ಯಕ್ತ ನಿಧನಾನ್ಯೇವ ತತ್ರ ಕಾ ಪರಿವೇದನಾ ೨೮

ಆಶ್ಚರ್ಯವತ್ಪಶ್ಯತಿ ಕಶ್ಚಿದೇನ
ಮಾಶ್ಚರ್ಯವದ್ವದತಿ ತಥೈವ ಚಾನ್ಯಃ
ಆಶ್ಚರ್ಯವಚ್ಚೈನ ಮನ್ಯಶ್ಶೃಣೋತಿ
ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ೨೯

ದೇಹೀ ನಿತ್ಯ ಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ
ತಸ್ಮಾತ್ಸರ್ವಾಣಿ ಭೂತಾನಿ ನತ್ವಂ ಶೋಚಿತು ಮರ್ಹಸಿ ೩೦

---

ಅನರಹನೋ ನೀನು ಫಲುಗುಣಾ ಪ್ರಾಣಿಗಳು ನಾನಾ
ಅವ್ಯಕ್ತಾದಿ ಆದಿ ನಿಧನಾ
ದಿನ ಸ್ವಲ್ಪ ಮಧ್ಯದಿ ವ್ಯಕ್ತರೋ ಇದಕಳದಿರೋ
ಜ್ಞಾನಿಗಳು ದುಃಖಿಸರೋ ೨೮-೨೯

ಶ್ಲೋಕ:—

ಒಬ್ಬಾನೊಬ್ಬನು ಕಾಂಬನಾಶ್ಚರ್ಯವತ್ ಕೇ
ಳೊಬ್ಬಾನೊಬ್ಬನು ನುಡಿವನಾಶ್ಚರ್ಯವತ್ತಿ
ಬಿಂಬಾ ಲಕ್ಷಣ ಕೇಳ್ವನಾಶ್ಚರ್ಯವತು ಮ
ತ್ತೊಬ್ಬಾ ಕೇಳಿದಾಗ್ಯಾದರರಿಯನಿವನಾ ೨೯

ಪದ:—

ಸಕಲ ದೇಹದಿ ಸ್ಥಿತ ದೇವನು ನಿತ್ಯಾವಧ್ಯನೂ
ಅದುಕಾರಣ ನೀನೂ
ಅಖಿಳ ಪ್ರಾಣಿಗಳಿಗೋಸುಗ ಹೀಗೆ ದುಃಖಿಸಲು ಈಗ
ಅರ್ಹನಲ್ಲವೊ ಜೀಗ

ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ॥೧

ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧ ಮೀದೃಶಂ ೩೨

ಅಥಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ
ತತ ಸ್ಸ್ವಧರ್ಮಂ ಕೀರ್ತಿಂಚ ಹಿತ್ವಾ ಪಾಪಮವಾಪ್ಸ್ಯಸಿ ೩೩

---

ಸುಖದ ಸ್ವಧರ್ಮದತ್ತಲು ನೋಡೋ ಕಂಪಿಸಲು ಬೇಡೊ
ಕ್ಷತ್ರಿಯಗೆ ಯುದ್ಧ ಮಾಡೋ
ಪಕಳಂಕ ಮಹಿಮೆ ಶ್ರೇಯೋನ್ನತು ಇಲ್ಲವೊ ಅಂತು
ಯುದ್ಧವನೆ ಮಾಡೊ ನಿಂತೂ ೩೦-೩೧

ಶ್ಲೋಕ –

ಯದೃಚ್ಛೆಂದಲಿ ಸ್ವರ್ಗದಾ ದ್ವಾರ ತೆರದೂ ।
ಇಪ್ಪದರ್ಜುನ ಸುಖಿಗಳಾದಂಥ ನೃಪರೂ
ಐದೋ ಗೋಸುಗಾ ಇಂಥ ಯುದ್ಧಾಖ್ಯ ಧರ್ಮ
ಲಭ್ಯವಾಯಿತೊ ಕೇಳು ಪಾಂಡವನೆ ಇಂದು ೩೨

ಪದ–

ನೀನು ಸ್ವಧರ್ಮ ಸಂಬಂಧದಾ ಮಂಗಳಪ್ರದಾ
ಯುದ್ಧವನು ಮಾಡದ್ದೋದ್ದಾ
ಹೀನನಾಗುವಿ ಸ್ವಧರ್ಮವ ಬಿಟ್ಟೊ ಕೀರುತಿಯು ಸುಟ್ಟು
ಜ್ಞಾನವನ್ನೆ ಬಚ್ಚಿಟ್ಟೊ
ಏನೆಂಬೆ ಪಾಪನ್ನೈದುವಿ ಇಂದೀ ಹಟ ಬಿಟ್ಟೆಂದೀ
ರೇಶ ವಿಠಲನಪ್ಪೊಂದೀ
ದೀನ ವತ್ಸಲನ ಕೆಲಸ್ತವು ಇದು ಬಿಡಲಾಗದು
ನಡಿಸಲು ಮುಕ್ತಿಯಿಹುದು ೩೩

ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್
ಸಂಭಾವಿತಸ್ಯಚಾಕೀರ್ತಿ ರ್ಮರಣಾದತಿರಿಚ್ಯತೇ ೩೪
ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ
ಯೇಷಾಂಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಂ ೩೫
ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನುಕಿಂ ೩೬
ಹತೋ ವಾಪ್ರಾಪ್ಸ್ಯಸೇ ಸ್ವರ್ಗಂ ಜಿತ್ವಾವಾ ಭೋಕ್ಷ್ಯಸೇ ಮಹೀಂ
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತ ನಿಶ್ಚಯಃ ೩೭

---

ಪದ ಅಟತಾಳ

ಜನರು ಮತ್ತು ಕೆಡದಪಕೀರ್ತಿ ಕರೆದ ವ
ಚನ ನುಡಿದಣಕವಾಡುವರೊ
ಅನಿಮಿಶೇಷಜ ಸಂಭಾವಿತ ಗಪಕೀರ್ತಿಯು
ಹನನ ಕಿಂತಧಿಕ ವೆಂಬುವರೊ ೩೪

ಭೀತನಾಗಿ ರಣದಿಂದ ಅರ್ಜುನ ಉಪ
ರಾತನೆಂದು ಮಹಾರಥರು
ಈತೆರ ತಿಳಿವರೊ ಆವರಿಗು ನೀ ಬಲ್ಲಿ
ದಾತನಾಗಿ ಲಘುತನೂ ೩೫

ಪೊಂದುವಿ ನಿನಗಹಿತರು ಬಹು ವಿಧವಾದ
ನಿಂದ್ಯ ಅವಾಚ್ಯ ವಾದಗಳ
ಮುಂದಾಡುವರು ಮತ್ತು ನಿನ್ನ ಸಾಮರ್ಥ್ಯವ
ನಿಂದಿಸುವರು ಇದ ಹೊರತು ೩೬

ಇನ್ನೊಂದು ದುಃಖ ಉಂಟೇನೊ ಅರ್ಜುನ ಕೇಳೊ
ಘನ್ನ ರಣದಿ ಯುದ್ಧದೊಳಗೆ
ಇನ್ನು ನೀ ಹತನಾದ್ಯಾ ಸ್ವರ್ಗಪೈದುವಿ ಗೆದ್ಯಾ
ಉಣ್ಣುವಿ ರಾಜ್ಯ ಭೋಗಗಳಾ ೩೭

ಸುಖದುಃಖೇ ಸಮೇಕೃತ್ವಾ ಲಾಭಾಲಾಭೌ ಜಯಾಜಯೌ ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪ ಮವಾಪ್ಸ್ಯಸಿ ೩೮
ಏಷಾತೇಽಭಿಹಿತಾ ಸಾಂಖ್ಯೇ ಬುದ್ಧಿಯೋರ್ಗೇತ್ವಿಮಾಂಶೃಣು
ಬುದ್ಧ್ಯಾಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ೩೯
ನೇಹಾಭಿ ಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ
ಸ್ವಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ೪೦
ವ್ಯವಸಾಯಾತ್ಮಿಕಾ ಬುದ್ಧಿ ರೇಕೇಹ ಕುರುನಂದನ
ಬಹು ಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ೪೧

---

ಅದು ಕಾರಣದಿ ಅರ್ಜುನನೆ ಯುದ್ಧಗೋಸ್ಕರ
ಹೆದರದೆ ನಿಶ್ಚಯಮಾಡಿ
ಮದಡನಾಗದೆ ನಿಳು ನೃಪರಿಗಿಂಥಾ ಧರ್ಮ
ಒದಗೊದಸಾಧ್ಯವು ಕೇಳೊ

ಸುಖದುಃಖ ಲಾಭ ಅಲಾಭ ಜಯಾ ಜಯ
ಸಕಲ ದ್ವಂದ್ವಗಳೆಲ್ಲ ಸಮ ಮಾ
ಡ್ಯಕಳಂಕನಾಗಿ ಬಳಿಕ ಯುದ್ಧಕನುವಾಗು
ಪ್ರಕಟಿಸದೈ ಪಾಪ ನಿನಗೆ ೩೮

ಇಂದಿರೇಶ ವಿಠಲನ ಕ್ಲಪ್ತದ ಜ್ಞಾನ
ವಿಂದೂ ಹೇಳಿದೆ ಬುದ್ಧಿ ಯೋಗಾ
ಮುಂದೆ ಹೇಳುವೆ ಕೇಳು ಆ ಬುದ್ಧಿಯಿಂ ಕರ್ಮ
ಬಂಧ ಅಳಿಯುನಿ ಕುಂತೀಕುವರಾ ೩೯

"ಉತ್ಪಾಪನ್ನಕ್ತ" —

ಲೋಕದಲ್ಲಿ ಧರ್ಮಕಾರ್ಮಪಕ್ರಮಕ್ಕೆ ನಾಶವ್ರಂ
ಟೆಂಬೊದಿಲ್ಲ ಪ್ರತ್ಯವಾಯ ಇಲ್ಲ ಕೇಳು ಅರ್ಜುನಾ
ಏಕಧರ್ಮ ಕಾರ್ಯದಲ್ಲಿ ಸ್ವಲ್ಪ ಆಚರಿಸಿದ ಮಾತ್ರ
ಮಹಾಭಯದ್ದೆಸಿಂದ ದಾಟಿಸುತ್ತೆ ಕರ್ಮವ್ವೂ ೪೦

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ೪೨

ಕಾಮಾತ್ಮಾನಸ್ಸ್ವರ್ಗಪರಾ ಜನ್ಮಕರ್ಮ ಫಲಪ್ರದಾಮ್
ಕ್ರಿಯಾವಿಶೇಷ ಬಹುಲಾಂ ಭೋಗೈಶ್ವರ್ಯ ಗತಿಂ ಪ್ರತಿ ೪೩

ಭೋಗೈಶ್ವರ್ಯ ಪ್ರಸಕ್ತಾನಾಂ ತಯಾಪಹೃತ ಚೇತಸಾಮ್
ವ್ಯವಸಾಯಾತ್ಮಿಕಾ ಬುದ್ಧಿ ಸ್ಸಮಾಧೌ ನ ವಿಧೀಯತೇ ೪೪

---

ನಿಶ್ಚಯಾರ್ಥ ಜ್ಞಾನಯುಕ್ತ ಜನರ ಬುದ್ಧಿ ಒಂದೆ ಕೇಳ
ನಿಶ್ಚಯಾರ್ಥ ಜ್ಞಾನಯುಕ್ತ ಜನರ ಬುಧ್ಯನಂತವು
ಸ್ವೇಚ್ಛೆಯಿಂದ ಶಾಖೆಕೆ ಉಪಶಾಖವಾಗಿ ಹರಿವುದೂ
ಸ್ವಚ್ಛವಲ್ಲ ಮತ್ತು ಇವರ ಇರವು ಕೇಳೊ ಪಾರ್ಥನೆ ೪೨

ವೇದಗಳಿಗೆ *ಗೋಪ್ಯವಾದ ಫಲಿತ ಅರ್ಥ ತಿಳಿಯದ
ವೇದವಾದರತರು ಪುಷ್ಪಿತಾರ್ಥ ಹೇಳಿ ನಾನ್ಯವೆಂ
ದ್ವಾದಿಸುವರು ಕೇಳು ಪಾರ್ಥ ಹೀಗೆ ಜ್ಞಾನ ರಹಿತರು
ಹಾದಿ ತಪ್ಪಿ ನಿಶ್ಚಯಾರ್ಥವರಿಯದೆ ಬಳಲುವರು ೪೩

ವಿವಿಧ ಕಾಮಯುಕ್ತ ಸ್ವರ್ಗ ಪರರು ಜನ್ಮ ಕರ್ಮದ
ಭವಕೆ ಹೇತುಭೂತವಾದ ಫಲದ ಕಾಮ್ಯ ಕರ್ಮವೆ
ಧ್ರುವವಿದೆಂದು ಭೂತಿಭೋಗವನ್ನೆ ಕುರಿತು ನಿತ್ಯದಿ
ಭವಣೆ ಬಡುತಲಿಹರು ಕೇಳ್ಕ್ರಿಯಾವಿಶೇಷ ಬಹಳರೂ ೪೪

---

*ಫಲಸ್ಥಾನೀಯವಾದ ಮೋಕ್ಷರೂಪ ಅರ್ಥವನ್ನು ಪುಷ್ಪಸ್ಥಾನೀಯವಾದ ಸ್ವರ್ಗ ಫಲವೆಂದು ಹೇಳಿ-

ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನಾ
ನಿರ್ದ್ವಂದ್ವೋ ನಿತ್ಯ ಸತ್ವಸ್ಥೋ ನಿರ್ಯೋಗ ಕ್ಷೇಮ ಆತ್ಮವಾನ್ ೪೫

ಯಾವಾನರ್ಥ ಉದಪಾನೇ ಸರ್ವತ ಸ್ಸಂಪ್ಲುತೋದಕೇ
ತಾವಾನ್‌ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ೪೬

---

ಅಷ್ಟಪದೀಗದ್ಯ:—

ಸಿರಿಯ ಭೋಗದಿ ಶಿಲ್ಕಿ ಅದರಿಂದ ಕೇಳು ಅಪ
ಹರಿಸಲಪ್ಪಟ್ಟ ಚಿತ್ತವನುಳ್ಳವರುಗಳಿಗೆ
ದೊರಕದೈ ನಿಶ್ಚಯಜ್ಞಾನ ಸುಸಮಾಧಿಯಲಿ
ಸ್ಥಿರಪಡದ ಬುದ್ಧಿ ಕೇಳೈ

ಸ್ವರ್ಗಾದಿ ಫಲವೆಂದು ಪೇಳ್ವಂತೆ ತೋರುತಿಹ
ವರ ವೇದಗಳ ತೋರಿಕೆಯ ಅರ್ಥವನ್ನುಳಿದು
ನಿರುತ ನಿರ್ದ್ವಂದ್ವನುಂ ಸತ್ವಸ್ಥನಾಗುತಲಿ
ತೊರೆ ಕಾಮ್ಯಗಳಲಿಚ್ಛೆಯಾ ೪೪-೪೫

ಧರೆಯೊಳೆಷ್ಟು ಪ್ರಯೋಜನವು ಕೂಪೋದಕದಿ
ನರರಿಗಾಹುದೊ ಅಷ್ಟು ಸರ್ವತ್ರ ತುಂಬಿದಾ
ಶರಧಿ ಮೊದಲಾದ ಜಲದಿಂದಲಾಗುವುದು ಈ
ತೆರದಿ ವೇದಗಳಿಂದಲಿ

ನಿರುತ ಪ್ರತಿಪಾದ್ಯವಹ ಕರ್ಮಾಚರಣೆಯಿಂದ
ಧರೆಯಲಾವಾವ ಫಲವಹುದೊ ಅಷ್ಟೆಲ್ಲ ಫಲ
ಪರಮ ಬ್ರಹ್ಮಜ್ಞಾನಿಗಹುದು ತತ್ವಾರ್ಥವಿದ
ನರಿ ಪಾರ್ಥ ನೀನೆಂದನು ೪೬

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ
ಮಾ ಕರ್ಮಫಲ ಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ೪೭

ಯೋಗಸ್ಥಃ ಕುರು ಕರ್ಮಾಣಿ ಸಂಗಂತ್ಯಕ್ತ್ವಾ ಧನಂಜಯ
ಸಿದ್ಧ್ಯಸಿದ್ಧ್ಯೋಃ ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ ೪೮

---

## ಸು ಳಾ ದಿ

### ರೂ ಪ ಕ ತಾ ಳ

ತ್ರಿಗುಣರಹಿತಾರ್ಥ ಹೇಳುವೆ ಕೇಳು ಸರ್ವರೊಳು
ಜಗದೀಶನೆ ತಾ ನಿಂತು ದಿನ ಪ್ರತಿ ದಿನದಲ್ಲಿ
ಬಗೆಬಗೆ ಕರ್ಮಗಳಾ ಮಾಡಿಸುವನದರಿಂದೆ
ನಗೆ ಇಲ್ಲ ತಾತ್ಕಾಲವೆಂದು ತಿಳಿಯೋ,
ನಿಗಮಗೋಚರ ಇಂದಿರೆಪತಿ ವಿಠಲರಾಯಾ ಜೀವಗಳಿಗೆ ಈ
ಜ್ಞಾನ ಪುಟ್ಟಿಸಿದರೆ ಕೆಡರೋ

### ಧ್ರು ವ ತಾ ಳ

ಅದು ಕಾರಣದಿ ಕರ್ಮ ಹರಿಮಾಡಿಸೀವಂದಾದಿ
ಸದಾ ಮಾಡುವದಾಕಧಿಕಾರಾ ನಿನಗೆ
ಇದರಾ ಫಲಾದಿ ಸಂಗ ಬೇಡಾ ಕರ್ಮಫಲಕ್ಕೆ
ಮದಡಾನಾಗೀ ನೀ ಕಾರಣನಾಗಬೇಡ
ವಿಧಿಪೂರ್ವಕಾ ಕರ್ಮಗಳ ನಾ ಮಾಡುವವಿಲ್ಲೆಂಬು -
ವದರಲ್ಲಿ ಸಂಗಾಬ್ಯಾಡ ಜ್ಞಾನಯೋಗ
ವಿದೆ ಕೇಳು ಇಂದಿರೇಶಾ ವಿಠಲನ ಕ್ಲಿಪ್ತ ಸ್ವಭಾವ
ವಾದ್ಯಅನುಸಾರ ಕರ್ಮಾವದರಂತಾಗುವುದೋ ಫಲವು

ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ೪೯

ಬುದ್ಧಿ ಯುಕ್ತೋ ಜಹಾತೀಹ ಉಭೇ ಸುಕೃತ ದುಷ್ಕೃತೇ
ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್|| ೫೦

---

ಅ ಟ ತಾ ಳ

ಯೋಗಸ್ಥನಾಗಿ ಕರ್ಮವ ಮಾಡು ತತ್ಸಂಗ
ನೀಗಿ ಸಿದ್ಧಿಯು ಅಸಿದ್ಧಿಯು ಆದ ಕಾಲಕ್ಕೆ
ಯೋಗಿ ತಾನೊಳು ಭಕ್ತಿದ್ವೇಷ ಮಾಡದೆ ಸಮ
ನಾಗಿ ಭಕ್ತಿಯ ಮಾಡುವದೆ ದ್ವಂದ್ವ ಸಮವೆಂಬ
ಯೋಗವೆಂದ್ಹೇಳಿಸಿ ಕೊಳುತಿಪ್ಪದೈ ಪಾರ್ಥ
ಹೀಗೆಂಬ ಬುದ್ಧಿಯೋಗವಕಿಂತ, ಈ ಜ್ಞಾನಾಪಾಗದೆ ಮಾಳ್ಪ
ವಿವಿಧ ಕರ್ಮಗತಿಕಾರಣಾಗದು ದೂರಾದಲ್ಲೆ ನೀಚವೆನಿಪುದು
ಪೋಗುವ ವಿವಿಧ ಫಲವಾ ಕೊಡುವದು ಲುಬ್ಧ
ರಾಗೀದು ಬಿಡಲಾರದಲೆ ಫಲಕಾರಣ
ರಾಗುವರಿದೆ ಬಯಸುತ ಮಂದಮತಿಗಳು
ಸಾಗರಶಯನಾ ಇಂದಿರೇಪತಿ ವಿಠಲ
ನೀ ಗುಣತ್ರಯದೊಳು ಬಂಧಿಸುವನೊ ಕೇಳೊ । ೪೭-೪೮-೪೯

ಆ ದಿ ತಾ ಳ

ಬುದ್ಧಿಯುಕ್ತನು ಲೋಕದೊಳಗೆ ರಹಸ್ಯ ತತ್ವ
ಪದ್ಧತಿ ತಿಳಿದು ಸುಕೃತ ದುಷ್ಕೃತವೆಂಬ
ಹೊದ್ದಿದವೆರಡರ ಫಲವ ಬಿಡುವ ಪರಿ
ಶುದ್ಧನಿವನು ಅದುಕಾರಣ ಪೂರ್ವೋಕ್ತ
ಬುದ್ಧಿಯೋಗಾವನ್ನೈದು ಇದನರಿಯದ ಅಪ್ರ

ಕರ್ಮಜಂ ಬುದ್ಧಿಯುಕ್ತಾಹಿ ಫಲಂ ತ್ಯಕ್ತ್ವಾ ಮನೀಷಿಣಃ
ಜನ್ಮಬಂಧ ವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥ ೫೧

ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ
ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯಚ ೫೨

---

ಬುದ್ಧರು ಮಾಡುವ ಸತ್ಕರ್ಮಗಳಿಗಿಂತ
ಶುದ್ಧ ಕುಶಲವುಳ್ಳ ಜ್ಞಾನಯೋಗವು ಇದು
ಶ್ರದ್ಧೆಯಿಂದಲಿ ಕೇಳು ಬುದ್ಧಿಯುಕ್ತರು ಮಹಾ
ವಿದ್ಯಾವಂತರು ಕರ್ಮದಿಂದ ಹುಟ್ಟಿದ ಫಲವನ್ನು ಬಿಟ್ಟು
ಜನ್ಮ ಮರಣದೊಳಗೆ ನಿತ್ಯ
ಬದ್ಧರಾಗದೆ ಬಂಧನಿರ್ಮುಕ್ತ
ರಾಗಿ ಉಪದ್ರವ ರಹಿತ ಇಂದಿರೆಪತಿ ವಿಠಲನ
ಭದ್ರಪದವ ನೈದುತಿಹರು ಶಾಶ್ವತವಾದ ೫೦-೫೧

ತ್ರಿ ಪು ಟ ತಾ ಳ

ಎಂದಿಗೆ ನಿನಗೆ ಕಲಿಲವಾದಾ ಮೋಹವು
ನಿಂದಿಸದೆ ದಾಟುತಿಹುದೊ ಬುದ್ಧಿಯಿಂದಾಗ
ಮುಂದೆ ಕೇಳುವುದಕೆ ಹಿಂದೆ ಕೇಳ್ದುದಕೆಲ್ಲ
ಪೊಂದುವಿ ಫಲರೂಪ ಜ್ಞಾನ ಕೇಳೊ ಅದ
ರಿಂದ ಕೇಳಿದ ವೇದಾರ್ಥವು ಮನದಲಿ ಚಲಿಸಾ
ದಂದದಿ ಇರುವುದು ಯಾವಾಗಲೊ
ಆಗದಂದ್ಹೇಳು ಆಗದಾ ಯೋಗಾಧಿಕಾರಿಯು
ಅಂದಿಗಾಗುವಿ ಸು ಸಮಾಧಿಯಲಿ ಮನ
ನಿಂದಾರೆ ಚಲಿಸಾದೆ ದಹರಾಖ್ಯಾ ಹೃದಯಾದ
ಮಂದಿರಾದಲಿ ವಾಸವಾಗಿರುವ ಬಿಂಬಾ

ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ
ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ೫೩

ಅರ್ಜುನ ಉವಾಚ —

ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಂ ೫೪

---

ಇಂದಿರಾಪತಿ ವಿಠಲನ್ನಾ ಮೂರ್ತಿಯ ಕಾಂಬೀ
ದ್ವಂದ್ವಾವಳಿಯುನಿ ನೀನಲ್ಲಿಂದ ಮುಂದಕೆ ಕೇಳೊ ೫೨-೫೩

ಪದ ರಾಗ ರೇಗುಪ್ತಿ ಆದಿತಾಳ

ಅರ್ಜುನಃ :—

ಹೇಳು, ಕೇಳುವೆನೊ ಯದುಪುಂಗವ ಕೃಷ್ಣನೆ ಪ.

ಕೀಳು ಮಾಡದಲೆ ಪಾಲಿಸು ಕರುಣದಿ ಅ.

ಅಷ್ಟಾಂಗವ ಯೋಗ ಸಮಾಧಿಯೊಳುಳ್ಳಾ
ಶ್ರೇಷ್ಠ ಸ್ಥಿತಪ್ರಜ್ಞಗೆ ಕುರುಹ್ಯಾವುದೊ
ಕಷ್ಟನಿವಾರಕುತ್ಕೃಷ್ಟ ದಯಾಂಬುಧೆ ೧

ಏನು ಮಾಡುವನೊ ಸ್ಥಿತಮತಿ ಮಾನವ, ಮ
ತ್ತೇನು ಮಾಡುವನೊ ಹ್ಯಾಗೆ ನಡೆಯುವನೊ
ಜ್ಞಾನಿಯು ಹ್ಯಾಗಿರುವನೊ ಕರುಣದೊಳಿದ ೨

ಇಂದಿರೇಶ ವಿಠಲನ ಮೂರ್ತಿ ಹೃದಯ
ಮಂದಿರದಲಿ ಕಾಣುವವನು ವಿಷಯಜ
ದ್ವಂದ್ವವನುಭವಿಸುವ ವಿಧವನು ಎನಗ್ಹೇಳು ೩ ೫೪

ಶ್ರೀ ಭಗವಾನುವಾಚ:—

ಪ್ರಜಹಾತಿ ಯದಾಕಾಮಾನ್ ಸರ್ವಾನ್ ಪಾರ್ಥಮನೋಗತಾನ್
ಆತ್ಮನ್ಯೇವಾತ್ಮನಾತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ೫೫

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ
ವೀತರಾಗ ಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ೫೬

ಯಸ್ಸರ್ವತ್ರಾನಭಿಸ್ನೇಹ ಸ್ತತ್ತತ್ಪ್ರಾಪ್ಯ ಶುಭಾಶುಭಮ್
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ೫೭

---

ಷಟ್ಪದೀ ತ್ರಿಪುಟತಾಳ

ಮನದ ಬಯಕೆಗಳನ್ನೆ ಬಿಟ್ಟನು
ದಿನದಿ ಪರಮಾನಂದ ವಿಗ್ರಹ ತನುಸ
ವನದೊಳು ವಾಸವಾಗಿಹ ಹರಿಯ ಕಾಣುತಲಿ
ಮನದೊಳತಿ ಹರುಷದಲಿ ಸಂತು
ಷ್ಟನು ಯದಾಹನೊ ಆಗ ಕೇಳೈ
ಮುನಿಗಳು ಸ್ಥಿತಪ್ರಜ್ಞನೆಂದಾಡುವರು ಪಾಂಡವನೆ ೫೫

ಮೂರು ತಾಪಗಳಲ್ಲಿ ಮನದೊಳು
ಘೋರ ದುಃಖವಪಡನು ಸುಖದೊಳು
ದೂರ ಮಾಡುವ ಸ್ಪೃಹೆಯ ಸ್ನೇಹವ ಭಯವ ಕ್ರೋಧಗಳ ।
ಮೀರಿ ನಡೆವನು ಕೇಳು ಪಾರ್ಥನೆ
ಧಾರುಣಿಯೊಳೀತೆರದಿ ಇಹನನು
ಸೂರಿಗಳು ಸ್ಥಿತಪ್ರಜ್ಞನೆಂದಾಡುವರು ಕೇಳೆಂದಾ ॥ ೫೬

ಸತಿಸುತಾದಿ ಸಮಸ್ತ ವಸ್ತು ಪ್ರ
ತತಿಯೊಳು ಸ್ನೇಹಂಗಳಿಲ್ಲದೆ
ಪ್ರತಿದಿವಸ ಅವರಿಂದ ಪ್ರಾಪ್ಯ ಶುಭಾಶುಭಂಗಳಿಗೆ

ಯದಾ ಸಂಹರತೇ ಚಾಯಂ ಕೂರ್ಮೋಂಗಾನೀವ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ೫೮

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೆ ೫೯

---

ಅತಿಹರುಷಬಡ ದ್ವೇಷಿಸನು ಈ
ಕ್ಷಿತಿಯೊಳೀವಿಧ ಇರುವನಾವನೊ
ಸತತ ಆತಗೆ ಪ್ರಜ್ಞೆ ನೆಲೆಗೊಂಡಿಹುದು ಕೇಳೆಂದಾ ೫೭

ನಡೆವ ಕಮಠವು ಕೇಳು ತನ್ನಯ
ಒಡಲೊಳಗೆ ಕೈಕಾಲು ಶಿರವನೆ
ಅಡಗಿಸುವ ವೋಲಿಂದ್ರಿಯಂಗಳ ವಿಷಯದೊಳಗಿಂದ
ಅಡಿಗಡಿಗೆ ಎಳೆದೆಳೆದು ಮನವನು
ದೃಢದಿ ನಿಲಿಸುವನಾವನಾತಗೆ
ಬಿಡದೆ ಪ್ರಜ್ಞೆಯು ಸ್ಥಿರದಿ ನೆಲೆಗೊಂಡಿಹುದು ಕೇಳೆಂದಾ ೫೮

ವರಸುಯೋಗಕೆ ಯತ್ನ ಮಾಡುವ
ಪುರುಷ ವಿದ್ಯಾವಂತನಾದರು
ಭರದಿ ಪ್ರಮಥಿಸುತಿಪ್ಪ ಕರಣಗಳೆಲ್ಲ ಬಲುಹಿನಲಿ
ಮರುಳುಗೊಳಿಸುತ ಮನವನೆಳೆವುವು
ಪರಿಪರಿಯ ವಿಷಯಾಭಿಮುಖವಾ

ಗ್ಯುರುಪರಾಕ್ರಮಿ ಪಾರ್ಥ ಕೇಳೆಂದನು ಮುರಧ್ವಂಸಿ
ಅದು ನಿಮಿತ್ತದಿ ಇಂದ್ರಿಯಂಗಳ
ಮೊದಲು ನಿಯತಾಹಾರದಿಂದಲಿ
ಬೆದರದ್ಹಾಗೊಶಮಾಡಿ ಮತ್ಪರನಾದ ಮಾನವನು

ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ೬೦

ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ೬೧

ಧ್ಯಾಯತೋ ವಿಷಯಾನ್ ಪುಂಸ ಸ್ಸಂಗಸ್ತೇಷೂಪಜಾಯತೇ
ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ ೬೨

ಕ್ರೋಧಾದ್ಭವತಿ ಸಂಮೋಹ ಸ್ಸಂಮೋಹಾತ್ ಸ್ಮೃತಿ ವಿಭ್ರಮಃ
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ೬೩

---

ಮುದವನ್ನೈದುವನಾವನೀಪರಿ
ಇದನೊಶದೊಳಿಡುತಿಹನೊ ಆತಗೆ
ಸದಮಲ ಪ್ರಜ್ಞೆಯು ಪ್ರತಿಷ್ಠಿತವಾಗಿರುವುದೆಂದ|| ೫೯-೬೦

ಪದ ರಾಗ ಧನ್ಯಾಸಿ ಆದಿತಾಳ

ಇಂದ್ರಿಯಂಗಳ ವಶಾದಲ್ಲಿದಾದವನು
ಮುಂದೆ ಯೋಗಾಧಿಕಾರಿಯು ಆಗನವನು ಪ.

ಅದರಾ ಕಾರಣದಿ ವಿಷಯ - ಮುದದಿ ಧ್ಯಾನಿಸುವ
ಮದಡ ಪುರುಷ ಸದಾ - ಕುದಿವನೊ ಬಹಳ ೧

ಅವರದೆಸಿಂದಾ ಸಂಗಾ - ಉದಯಿಪುದ್ದೈಯು
ಅದರಿಂದ ಕಾಮವು - ಉದಯಿಸುತಿಹುದೈ ೨

ಅವರದೆಸಿಂದ ಕ್ರೋಧಾ - ಉದಯಿಪುದ್ದೈಯು
ಅದರಿಂದ ಸಮ್ಮೋಹಾ - ಉದಯಿಸುತಿಹುದೈ ೩

ಸ್ಮೃತಿವಿಭ್ರಮವಾಗು - ತತಿ ಇದರಿಂದ
ಮತಿ ಕೆಡುವುದು ಕುಂತೀ - ಸುತನೆ ಇದರಿಂದ ೪

ಮತಿ ಕೆಡಲಿಂದಿರಾ - ಪತಿ ವಿಠಲನ್ನಾ
ಮತವರಿಯದೆ ಕೆಟ್ಟು - ಅತಿ ದುಃಖಿಸುವನೊ ೫

೬೧-೬೨-೬೩

ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದ ಮಧಿಗಚ್ಛತಿ ೬೪
ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ |
ಪ್ರಸನ್ನ ಚೇತನೋಹ್ಯಾಶು ಬುದ್ಧಿಃ ಪರ್ಯವತಿಷ್ಠತಿ ೬೫
ನಾಸ್ತಿಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ
ನ ಚಾಭಾವಯತಶ್ಶಾಂತಿ ರಶಾಂತಸ್ಯ ಕುತಸ್ಸುಖಂ ೬೬

---

ಷಟ್ಪದೀ ತ್ರಿಪುಟತಾಳ

ರಾಗದ್ವೇಷಗಳನ್ನು ಯತ್ನದಿ
ನೀಗಿ ಇಂದ್ರಿಯಗಳನು ತನ್ನೊಶ
ವಾಗುವಂದದಿ ನಿಗ್ರಹಿಸಿ ವಶದಲ್ಲಿ ಸ್ಥಾಪಿಸಿದ
ಯೋಗಿ ಅನಿಷಿದ್ಧಾದ ವಿಷಯವ
ಭೋಗಿಸುತ ಕೇಳವರಧೀನವು
ಆಗದಂದದಿ ಇರಲು ಚಿತ್ತಪ್ರಸಾದವನ್ನೈದುವನು ೬೪

ಮನಸು ನಿರ್ಮಲವಾಗುತಿರೆ ಕೇ
ಳನವರತ ತಾಪತ್ರಯಕೆ ನಾ
ಶನವು ಹುಟ್ಟುತಲಿಹುದು ಚಿತ್ತಪ್ರಸನ್ನತಿಕೆಯಿಂದ
ಘನಸುಯೋಗದಿ ಬುದ್ಧಿ ಚಲಿಸದೆ
ಅನುದಿನದಿ ಸ್ಥಿರವಾಗಿ ಇಹ ದರ್ಜು
ನನೆ ಕೇಳೆಂದನು ರಮಾಧವನೊಲಿದು ಕರುಣದಲಿ ೬೫

ಹೀಗೆ ಮನ ನಿಗ್ರಹಿಸದಾತಗೆ
ಯೋಗಮಾರ್ಗದಿ ಬುದ್ಧಿ ಸುಸ್ಥಿರ
ವಾಗದೈ ಸದ್ಬುದ್ಧಿ ಹೀನಗೆ ಹರಿಯ ಭಾವನೆಯು
ಆಗದೀಪರಿ ಭಾವನೆಯು ಹೊರ
ತಾಗಿ ಶಾಂತಿಯು ಶಾಂತಿಹೀನಗೆ
ಈ ಗುಣತ್ರಯ ಬಂಧವಳಿಯುವ ಸೌಖ್ಯವೆತ್ತಣದೊ ೬೬

ಇಂದ್ರಿಯಾಣಾಂಹಿ ಚರತಾಂ ಯನ್ಮನೋಽನು ವಿಧೀಯತೇ
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ೬೭

ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ೬೮

---

ಅಷ್ಟಪದೀಗದ್ಯ:—

ಮಾರುತನು ನೀರಿನೊಳು ನಡೆವ ನಾವೆಯು ಪೋಗ
ವಿಾರಿ ಶಳಿಮೊಯ್ಯುವಂದದಲಿ ವಿಷಯಗಳಲ್ಲಿ
ಮೇರೆಯಿಲ್ಲದೆ ಚರಿಸುತಿಪ್ಪ ಇಂದ್ರಿಯಗಳಿಗೆ
ಸಾರಥಿಯು ತೆರದಿ ಮನವೂ

ಸೇರಿ ಪ್ರವರ್ತಿಸುತಲಿಪ್ಪುದಿದು ಈತನಾ
ಚಾರುತರ ಪ್ರಜ್ಞೆ ಕ್ಷಣಕ್ಷಣದಿ ನಿಲಿಸದಲೆ ಅಪ
ಹಾರ ಮಾಡುವುದು ಪಾಂಡವ ಮಧ್ಯಮನೆ ಕೇಳು
ಸಾರಿ ಹೇಳುವೆನೆಂದನು ೬೭

ಆರ್ಯಾ:—

ಅದುಕಾರಣ ಆವಾತನ ಇಂದ್ರಿಯಂಗಳು
ವಿಷಯಂಗಳ ದೆಸೆಯಿಂದ
ಚದರದಂತೆ ನಿಗ್ರಹಿಸಿದವಗೆ ಬಲ್ಲ
ವಿಕೆಯು ನೆಲೆಗೊಂಡಿಹುದೆಂದಾ ೬೮

ಯಾವ ವಿಷಯಕಜ್ಞಾನವೊ ಸರ್ವಭಿ
ಗಾ ವಿಷಯದಿ ಮುನಿ ಜಾಗ್ರತನೊ
ಆವ ವಿಷಯದಲಿ ಜಾಗ್ರತರೋ ಜನ
ವದನಿಶಿಯಂದದಿ ಕಾಣುವನೊ ೬೯

ಯಾನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ
ಯಸ್ಯಾಂ ಜಾಗ್ರತಿ ಭೂತಾನಿ ಸಾನಿಶಾ ಪಶ್ಯತೋ ಮುನೇಃ ೬೯

ಆಪೂರ್ಯಮಾಣಮಚಲ ಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶಂತಿ ಯದ್ವತ್
ತದ್ವತ್ಕಾಮಾಯಂ ಪ್ರವಿಶಂತಿ ಸರ್ವೇ
ಸಶಾಂತಿ ಮಾಪ್ನೋತಿ ನಕಾಮಕಾಮೀ ೭೦

---

ಪದ ಅಟತಾಳ

ತುಂಬಿ ಅಚಲ ಪ್ರತಿಷ್ಠೆಯನುಳ್ಳ ಶರಧಿಯೊ
ಳಂಬು ಯದ್ವತು ಪ್ರವೇಶಿಸಲು
ತುಂಬದೊ ಬರದಿರೆ ಬರಿದಾಗದಂತೆ ಏ
ನೆಂಬೆ ಜ್ಞಾನಿಯು ಹಗಲಿರುಳು ೧

ಅನಿಷಿದ್ಧ ವಿಷಯಗಳನು ಭವಿಸುವಗೋಸ್ಕ
ರನುದಿನ ಕಾಮಿಸಿ ಪಡದು
ಅನುಭವಿಸುವನತಿ ಹರ್ಷಪಡನು ದುಃಖಿ
ಸನು ಇಚ್ಛಾ ಭಂಗವ ನೆನೆದು ೨

ಹೀಗಿರುತಿಹನು ನಿಷ್ಕಾಮಿಯೆಂದೆನಿಸುವ
ಭೂಗೋಳದೊಳು ಜನರಿಂದ
ಸಾಗರದಂತೆ ಗಂಭೀರನಾಗಿಹ ನತಿ
ಬೇಗನೆ ಮುದ್ದಯದಿಂದ ೩

ಪರಮ ಶಾಂತಿಯ ಪಡೆವ ನದುಕಾರಣದಿ ಆವಾ
ಪುರುಷನೆಲ್ಲಾ ಕಾಮಗಳನು
ಚರಿಸುವನೋ ಬಿಟ್ಟು ನಿಸ್ಪೃಹ ನಿರ್ಮಮ
ನಿರಹಂಕಾರವನುಳ್ಳ ನರನು ೪

೭೦-೭೧

ವಿಹಾಯ ಕಾಮಾನ್ ಯಸ್ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ
ನಿರ್ಮಮೋ ನಿರಹಂಕಾರ ಸ್ಸಶಾಂತಿಮಧಿಗಚ್ಛತಿ ೭೧

ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ
ಸ್ಥಿತ್ವಾ ಸ್ಯಾಮಂತ ಕಾಲೇಽಪಿ ಬ್ರಹ್ಮ ನಿರ್ವಾಣ ಮೃಚ್ಛತಿ ೭೨

ಇತಿ ಶ್ರೀ ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀ ಕೃಷ್ಣಾರ್ಜುನ ಸಂವಾದೇ**
ಸಾಂಖ್ಯಯೋಗೋನಾಮ ದ್ವಿತೀಯೋಧ್ಯಾಯಃ

---

ಪರಮಶಾಂತಿಯನ್ನೈದುವನು ಆವಾತನು ಬ್ರಾಹ್ಮೀ
ಸ್ಥಿರವಾದ ಪೂರ್ವೋಕ್ತ ಸ್ಥಿತಿಯೂ
ವರವೆಂದೂ ನೈದಿದ ಬಳಿಕ ಮೋಹವನೈದ
ಇರುತಿರ್ದು ಇದರಲ್ಲಿ ಮೃತಿಯಾ ೫

ಕಾಲಾದಿ ಲಿಂಗ ದೇಹವ ಬಿಟ್ಟು ಬ್ರಹ್ಮನಾ
ಆಲಯದಲಿ ಸುಖಿಸುವನೊ
ಕೇಳು ಪಾಂಡವನೆ ಬಾಣವ ಪಿಡಿ ಯುದ್ಧಕೆ
ಏಳು ಏಳೆನ್ನುತಲಿಹನೋ ೬

೭೨

ಇತಿ ಶ್ರೀರಾಮಚಂದ್ರಾಭಿಧತನೂಜ ಶೇಷನಾಮಾಖ್ಯ ವಿರಚಿತೆ
**"ಗೀತಾರಂಜನಾ"**ಖ್ಯ ಗ್ರಂಥೇ ಸಾಂಖ್ಯಯೋಗೋ
ನಾಮ ದ್ವಿತೀಯೋಧ್ಯಾಯಃ



ಹರಿಃ ಓಂ

# ಮೂರನೆಯ ಅಧ್ಯಾಯ

---

ಅರ್ಜುನ ಉವಾಚ:—

ಜ್ಯಾಯಸೀ ಚೇತ್ಕರ್ಮಣಸ್ತೇ ಮತಾಬುದ್ಧಿ ರ್ಜನಾರ್ದನ
ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ೧

ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ೨

---

ಪದ ರಾಗ ಯಮುನಾಕಲ್ಯಾಣಿ ಆದಿತಾಳ

ಕೃಷ್ಣಾ ಬ್ರೂಹಿಮೆ ವೃಷ್ಣಿಕುಲೋದ್ಭವಾ ಪ.

ಪಂಚಕರ್ಮೇಂದ್ರಿಯ ಸಾಧ್ಯಕರ್ಮಪಕಿಂತ
ಮಿಂಚಿ ನಿನಗೆ ಸಮ್ಮತವೇ ಜ್ಞಾನಯೋಗವು ೧

ಓಗೆ ಸಮ್ಮತವಾದ ಪಕ್ಷದಿ ನಿನಗೆ
ಈಗ ಅದನೆ ಉಪದೇಶಿಸದಿರುವರೆ ೨

ಏನು ಕಾರಣ ಮುರಳಿ ಘೋರ ಕರ್ಮದಲಿ
ನೀನು ನಿಯೋಗಿಸುವಿಯೋ ಕೃಪಾಂಬುಧೆ ಎನ್ನಾ ೩

ವ್ಯಾಮಿಶ್ರವಾದ ಈ ವಾಕ್ಯಗಳಿಂದಾ
ನೀ ಮೋಹಿಸುವಂತೆ ಮಾಡುವೆ ಎನ್ನಾ ೪

ಎರಡು ಪಕ್ಷಗಳಲ್ಲಿ ನಿಜವ್ಯಾವುದೊಂದು
ಮುರಹರ ಆವುದರಿಂದ ಶ್ರೇಯವಾಹುದೊ ೫

ಇಂದಿರಾಪತಿ ವಿಠಲೇಂದು ನೀ ದಯದಿ
ಕುಂದನೆಣಿಸದಲೆ ಲಾಲಿಸೊ ದಯದಿ ೬

(೧-೨)

ಶ್ರೀ ಭಗವಾನುವಾಚ:—

ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾಪುರಾಪ್ರೋಕ್ತಾ ಮಯಾನಘ
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ೩

ನ ಕರ್ಮಣಾಮನಾರಂಭಾ ನ್ನೈಷ್ಕರ್ಮ್ಯಂ ಪುರುಷೋಽಶ್ನುತೇ
ನಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ೪

---

ಷಟ್ಪದೀ ತ್ರಿಪುಟತಾಳ

ಎರಡು ಮಾರ್ಗಗಳಿಹುವು ಮೋಕ್ಷಕೆ
ನರನೆ ಕೇಳೈ ಜ್ಞಾನಮಾರ್ಗವು
ಪರಮ ಕರ್ಮದ ಮಾರ್ಗವೆಂಬಿವು ಶ್ರೇಷ್ಠವೆನಿಸಿಹುವು
ನಿರುತವೀ ಮಾರ್ಗಗಳ ಸಾಧಿಸಿ
ಪರಮ ಮುಕ್ತಿಯ ಪಡೆದ ನರವರ
ರಿರುವರೈ ಕೇಳನಘ ಪೂರ್ವದಿ ನಾನು ಪೇಳ್ದಂತೆ

ಜ್ಞಾನ ಪ್ರಚುರಿತ ಕರ್ಮ ಮಾಳ್ಪರು
ಜ್ಞಾನಯೋಗಿಗಳೆನಿಸಿಕೊಳ್ವರು
ಜ್ಞಾನಕಧಿಕ ಪ್ರಮಾಣದಲಿ ಕರ್ಮಾಚರಣೆಗೈವ
ಮಾನವನು ತಾ ಕರ್ಮಯೋಗಿಯು
ನೀನು ಕ್ಷತ್ರಿಯ, ಪಾರ್ಥ ನಿನಗೀ
ಜ್ಞಾನ ಪ್ರಚುರಿತ ಕರ್ಮಮಾರ್ಗವೆ ಮುಕ್ತಿಸಾಧನವೈ ೩

ಕರ್ಮ ಕರಣಂಗಳಿಗುಪಕ್ರಮ
ಧರ್ಮಮಾಡದೆ ಬಿಟ್ಟನರ ನೈ
ಷ್ಕರ್ಮ್ಯ ಭೋಗವನೈದ ವರ್ಣಾಶ್ರಮಕುಚಿತವಾದಾ
ಕರ್ಮಮಾಡದೆ ಬಿಟ್ಟ ಮಾತ್ರದಿ
ಧರ್ಮಜ್ಞಾನವ ನೀಗಿ ಆತನು
ನಿರ್ಮಲದ ಸಿದ್ಧಿಯನೆ ಪಡೆಯನು ಎಂದನಸುರಾರಿ ೪

ನಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್ |
ಕಾರ್ಯತೇಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ೫

ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಸ್ಸಉಚ್ಯತೇ ೬

---

ರಾಗ ಆನಂದಭೈರವಿ ಅಟತಾಳ

ಕೇಳೊ ಪಾರ್ಥನೆ ಶ್ರದ್ಧೆಯಿಂದ ಜ್ಞಾನದ ಲಕ್ಷಣ
ಹೇಳುವೆ ನಿನಗೆ ನಾನೆಂದನು ಪ.

ಒಂದು ನಿಮಿಷವಾದರೂ ಜೀವನಾವನು
ನಿಂದಿರನೈ ಕರ್ಮಮಾಡದೆ
ಬಂಧಕ ಪ್ರಕೃತಿಜಾಗುಣದಿ ಅವಶನಾಗಿ
ನಿಂದ್ಯಾನಿಂದ್ಯದ ಕರ್ಮ ಮಾಡುವ ೧

ಸಕಲ ಕರ್ಮೇಂದ್ರಿಯ ನಿಯಮಿಸಿ ಮನದೊಳು
ಬಕನಂತೆ ಇಂದ್ರಿಯಾರ್ಥಗಳನು ಕೇ
ಳಕಳಂಕನಾಗಾದೆ ಧ್ಯಾನಿಪ ಮನುಜನು
ಪ್ರಕಟನಾಗುವನು ಮಿಥ್ಯಾಚಾರಿಯೆಂದೂ ೨

ಹಿಂದೆ ಪೇಳಿದ ಪರಿಯಿಂದದಿ ಮನಸಾ ಷ
ನೇಂದ್ರಿಯಗಳನು ನಿಯಮಿಸಿ ಕ
ರ್ಮೇಂದ್ರಿಯದಿಂ ಕರ್ಮಯೋಗಕಾರಂಭವು
ಕುಂದದೆ ಮಾಳ್ಪಸಕ್ತನು ಶ್ರೇಷ್ಠನೊ ೩

ಕರ್ಮ ಮಾಡುವುದೆ ಶ್ರೇಷ್ಠವು ಬಹು ವಿಧವಾದಾ
ಕರ್ಮ ಮಾಡದೆ ಬಿಡುವುದಕ್ಕಿಂತಲೂ
ಧರ್ಮ ಸಂಬಂಧ ನಿಯತವಾದ· ವಿಷಯಜಾ
ಕರ್ಮ ಮಾಡು ಮಾಡದಿರೆ ದೇಹವು ೪

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ
ಕರ್ಮೇಂದ್ರಿಯೈಃ ಕರ್ಮಯೋಗ ಮಸಕ್ತ ಸ್ಸವಿಶಿಷ್ಯತೇ ೭

ನಿಯತಂ ಕುರು ಕರ್ಮತ್ವಂ ಕರ್ಮಜ್ಯಾಯೋಹ್ಯ ಕರ್ಮಣಃ
ಶರೀರ ಯಾತ್ರಾಽಪಿಚ ತೇನ ಪ್ರಸಿದ್ಧ್ಯೇದ ಕರ್ಮಣಃ ೮

ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ
ತದರ್ಥಂ ಕರ್ಮ ಕೌಂತೇಯ ಮುಕ್ತಸ್ಸಂಗಸ್ಸಮಾಚರ ೯

---

ನಿಲ್ಲುವುದಕೆ ಕಾರಣಾಗದು ಇಂದಿರೇ
ವಲ್ಲಭ ವಿಠಲನ ಕ್ಲುಪ್ತವಿದೋ
ಬಲ್ಲವನಿವನೀಪರಿ ಹರಿಕರ್ತ ನಾಕರ್ತ
ನಲ್ಲವೆನುತ ಕರ್ಮಮಾಳ್ಪನೋ ೫

(೫-೬-೭-೮)

ಅಷ್ಟಪದೀಗದ್ಯಾ —

ಹರಿಗರ್ಪಣಾರ್ಥ ಮಾಡುವ ಕರ್ಮದನ್ಯತ್ರ
ಪರಿಪರಿಯ ಸತ್ಕರ್ಮಗಳು ಲೋಕದಲಿ ಬಂಧ
ಕರ ವಾಹವೆಂದು ತಿಳಿದವನಾಗಿ ನಿರ್ಭಯದಿ
ಹರಿಗರ್ಪಣಾರ್ಥವಾಗಿ

ನಿರುತ ನೀ ಕರ್ಮಗಳ ಮಾಡು ಮಾಡಿದೆನೆಂಬ
ಮರುಳಳಿದು ತತ್ಫಲವ ಬಯಸದೆ ನಿಸ್ಸಂಗ
ಜರಿದು ಬಿಟ್ಟೆನುವಾಗು ಯುದ್ಧ ಕಾರ್ಯಕೆ ಕೇಳ
ನರನೆಂದ ನಸುರಾರಿಯು

ಸಹಯಜ್ಞಾಃ ಪ್ರಜಾಸ್ಸೃಷ್ಟ್ವಾ ಪುರೋವಾಚ ಪ್ರಜಾಪತಿಃ
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ೧೦

ದೇವಾನ್ಭಾವಯತಾಽನೇನ ತೇ ದೇವಾ ಭಾವಯಂತುವಃ
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ೧೧

ಇಷ್ಟಾನ್ ಭೋಗಾನ್ ಹಿವೋದೇವಾ
ದಾಸ್ಯಂತೇ ಯಜ್ಞಭಾವಿತಾಃ
ತೈರ್ದತ್ತಾನ ಪ್ರದಾಯೈಭ್ಯೋ
ಯೋ ಭುಂಕ್ತೇ ಸ್ತೇನ ಏವಸಃ ೧೨

---

ಸೀಸಪದ್ಯ:—

ಅಜನು ಪೂರ್ವದಲ್ಯಜ್ಞ ಸಹಿತ ಪ್ರಜೆಗಳನೆಲ್ಲ
ಸೃಜಿಸಿ ನುಡಿದನು ಯಜ್ಞದಿಂದ ನೀವು
ಪುತ್ರಪೌತ್ರರ ಪಡೆದು ಸುಖಿಸಿರೀ ಯಜ್ಞ ಪಾ
ವಿತ್ರಕರ ಸಕಲಿಷ್ಟ ಕಾಮದುಘವೋ
ಇದರಿಂದ ನೀವು ದೇವತೆಗಳನೆ ಭಾವಿಸಲು
ಮುದದಿ ನಿಮ್ಮನು ತಮ್ಮ ಭೃತ್ಯರೆಂದೂ
ಭಾವಿಸುವ ರೀಪರಿ ಪರಸ್ಪರದಿ ಭಾವಿಸಲು
ನೀವು ಉತ್ಕೃಷ್ಟವಾದಂಥ ಸುಖವಾ
ಪೊಂದುವಿರಿ ಯಜ್ಞಭಾವಿತರಾದ ಸುರರು ನಿಮ
ಗೆಂದೆಂದು ಇಷ್ಟವಾದಂಥ ಭೋಗಾ
ಗಳನೆ ಕೊಡುವರು ಅವರು ಕೊಟ್ಟನ್ನದಿಂದ
ಅವರಿಗೋಸ್ಕರ ಯಜ್ಞಗಳನೆ ಮಾಡಿ
ಅವರ ನರ್ಚಿಸದೆ ಭುಂಜಿಸುವ ನರನು
ಅವನಿಯೊಳು ಕಳ್ಳ ದೇವಸ್ವಾಪಹಾರಿಯವನು ೧೦-೧೧-೧೨

ಯಜ್ಞಶಿಷ್ಟಾಶಿನಸ್ಸಂತೋ ಮುಚ್ಯಂತೇ ಸರ್ವ ಕಿಲ್ಬಿಷೈಃ
ಭುಂಜತೇ ತೇತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ೧೩

ಅನ್ನಾದ್ಭವಂತಿಭೂತಾನಿ ಪರ್ಜನ್ಯಾದನ್ನಸಂಭವಃ
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮ ಸಮುದ್ಭವಃ ೧೪

ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರ ಸಮುದ್ಭವಂ
ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯ ಯಜ್ಞೇ ಪ್ರತಿಷ್ಠಿತಂ ೧೫

---

ಷಟ್ಪದೀ ತ್ರಿಪುಟತಾಳ

ಪರಮ ಯಜ್ಞದ ಶೇಷ ಮನುಜನು
ನಿರುತ ಭುಂಜಿಸುತಿರಲು ಕೇಳ್ವೈ
ದುರಿತಗಳನೆಲ್ಲವನು ಬಿಡುವನು ಲೋಕದಲಿ ತಿಳಿದ್ಯೈ
ನರನು ಯಾವನು ತನ್ನ ಹೊಟ್ಟೆಯ
ಹೊರೆವುದಕೆ ಪಾಕವನು ಮಾಳ್ಪನೊ
ಅರರೆ ಪಾಪವ ನುಂಬುವನು ಕೇಳೆಂದನಸುರಾರಿ ೧೩

ಪದ ಅಟತಾಳ

ಅನ್ನದಿಂದುಟ್ಟುತಿಹರು ಪ್ರಾಣಿಗಳು ಪ
ರ್ಜನ್ಯಾಸಿಂದನ್ನ ಸಂಭವವೋ
ಜನ್ನಾದಿಂ ಪರ್ಜನ್ಯಾಗುತ್ಪತ್ತಿ ಜನ್ನ ಸಂ
ಪನ್ನಾ ಕರ್ಮದಿಂ ಹುಟ್ಟುತಿಹುದೋ ೧೪

ಪರಿಪರಿ ಕರ್ಮಗಳುದಿಸಿದುವು ಹರಿಯಿಂದ
ಹರಿಯಭಿವ್ಯಕ್ತ ವೇದಗಳಿಂ
ವರ ವೇದಗಳು ಭೂತಗಳಿಂದಭಿವ್ಯಕ್ತವು
ನರನೆ ನೀ ನರಿಯಿದವನೆಂದ ೧೫

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ೧೬

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ
ಆತ್ಮನ್ಯೇವ ಚ ಸಂತುಷ್ಟ ಸ್ತಸ್ಯ ಕಾರ್ಯಂ ನ ವಿದ್ಯತೇ ೧೭

ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ೧೮

ತಸ್ಮಾದಸಕ್ತಸ್ಸತತಂ ಕಾರ್ಯಂ ಕರ್ಮ ಸಮಾಚಾರ
ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ೧೯

---

ಈ ಪರಿ ವರ್ತಿಸುತಿಪ್ಪ ಚಕ್ರವನೆ ಆ
ವಾಪುರುಷಾನು ಸರಿಸನೊ
ಪಾಪ ಜನಕ ಆಯು ನೂಕುತ್ತ ಧರೆಯೊಳಾ
ಕಾಪುರುಷನು ವ್ಯರ್ಥವಸಿಪ ೧೬

ಆತ್ಮನಲ್ಲೆ ರತಿ ಉಳ್ಳವನಾಗುತ
ಆತ್ಮಜ್ಞಾನದಿ ತೃಪ್ತನಾಗಿ
ಆತ್ಮ ದರುಶನದಿಂದ ಸಂತುಷ್ಟನಾ ವು
ಕ್ತಾತ್ಮಗೆ ಕರ್ಮ ಕರಣವು ೧೭

ಇಲ್ಲಾ ಮಾಡಿದರಿಂದ ಪ್ರಾಪ್ಯಾರ್ಥವವಗೆ ಬೇ
ಕಿಲ್ಲ ಕರ್ಮವ ಮಾಡದಿರೆ ಕೇ
ಡಿಲ್ಲವೊ ಯಾವ ಪ್ರಯೋಜನಾರ್ಥಾಶ್ರೈಪಾ
ದಿಲ್ಲ ಸರ್ವ ಪ್ರಾಣಿಗಳನು ೧೮

ಧರೆಯಲ್ಲಿ ಸಕ್ತನಾಗದೆ ಕರ್ಮಫಲದೊಳು
ಪುರುಷ ಕರ್ಮವ ನಾಚರಿಸಲು
ಸ್ಥಿರವಾದ ಪರಮಪದವನೈದುತಿಹ ಕೇಳು
ವರ ಹೀಗೆ ಮಾಳ್ಪ ಕರ್ಮಗಳು

ಕರ್ಮಣೈವಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ
ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ೨೦

ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋಜನಃ
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ೨೧

ನ ಮೇ ಪಾರ್ಥಾಸ್ತಿ ಕರ್ತವ್ಯ ತ್ರಿಷು ಲೋಕೇಷು ಕಿಂಚನ
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ೨೨

---

ಅದುಕಾರಣದಿ ಸಕ್ತನಾಗದೆ ಸತ
ತದಿ ವಿಧಿ ವಿಹಿತದ ಕರ್ಮಗಳನು
ಮದಡಾನಾಗದೆ ಮಾಡು
ಇಂದಿರಾಪತಿ ವಿಠಲದರಿಂದ ಕೊಡುವ ಫಲಗಳನು ೧೯

ಅಷ್ಟಪದೀಗದ್ಯಾ:—

ಕರ್ಮ ಆಚರಿಸುವುದರಿಂದಲೇ ಜನಕಾದಿ
ಸನ್ಮುನಿಗಳೆಲ್ಲ ಸಿದ್ಧಿಯನ್ನೈದಿದರು ಕೇಳು
ಹಮ್ಮನುಳಿದಿಹಲೋಕ ಸಂಗ್ರಹಾರ್ಥವ ಕಂಡು
ಕರ್ಮಮಾಡಲು ಅರ್ಹ ನೀ

ಈ ಮಹಿಯೊಳಗೆ ಶ್ರೇಷ್ಠ ಯದ್ಯದಾ ಚರಿಸುವಾ
ಧರ್ಮವದರನ್ನೆ ಆಚರಿಪರಿತರರು ಬಿಡದೆ
*ಹಮ್ಮನುಜ ಯಶ್ಪ್ರಮಾಣವನು ಅನುಸರಿಪನಾ
ಧರ್ಮ ಲೋಕನುಸರಿಪುದು ೨೦-೨೧

ಎನಗೆ ಕರ್ತವ್ಯ ಕರ್ಮಗಳಿಲ್ಲ ಕೇಳು ಅ
ರ್ಜುನನೆ ಮೂಲೋಕದೊಳು ಪ್ರಾಪ್ಯ ವಸ್ತುಗಳಿಲ್ಲ
ಎನಗೆ ಅಪ್ರಾಪ್ಯ ವಸ್ತುಗಳಿಲ್ಲ ಸ್ವತಂತ್ರ
ಅನುದಿನದಿ ಕರ್ಮ ಮಾಳ್ಪೆ.

---

*ಹಮ್ಮನುಜ = ಶ್ರೇಷ್ಠ, ಸತ್ಪುರುಷ.

ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ೨೩

ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್
ಸಂಕರಸ್ಯಚ ಕರ್ತಾಸ್ಯಾ ಮುಪಹನ್ಯಾಮಿಮಾಃ ಪ್ರಜಾಃ ೨೪

ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ
ಕುರ್ಯಾದ್ವಿದ್ವಾಂಸ್ತಥಾಽಸಕ್ತಶ್ಚಿಕೀರ್ಷುರ್ಲೋಕ ಸಂಗ್ರಹಮ್ ೨೫

ನ ಬುದ್ಧಿ ಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್
ಜೋಷಯೇತ್ಸರ್ವ ಕರ್ಮಾಣಿ ವಿದ್ವಾನ್‌ಯುಕ್ತ ಸ್ಸಮಾಚರನ್ ೨೬

---

ಇನಿತು ನಾ ಸತ್ಕರ್ಮಗಳ ಮತಂದ್ರಿತನಾಗಿ
ಅನುಸರಿಸದಿದ್ದ ಪಕ್ಷದಿ ಸರ್ವ ಪ್ರಾಣಿಗಳು
ಅನುವರ್ತಿಸುವರೆನ್ನ ಮಾರ್ಗವನೆ ಸರ್ವದಾ
ಇನಿತಾಗೆ ಕೆಡುವರೆಲ್ಲಾ ೨೨-೨೩

ನಿರುತ ನಾ ಕರ್ಮ ಮಾಡದ ಪಕ್ಷದಲ್ಲಿ ಈ
ನರಲೋಕದವರಿದನೆ ಬಿಟ್ಟು ಕೆಡುತಿಹರು ಸಂ
ಕರರ ಮಾಡಿದವನಹೆ ಪ್ರಜೆಗಳನೆ ಕೆಡಿಸಿದಾ
ಪುರುಷನಾನಹೆನೆಂದನು

ಧರೆಯೊಳಗವಿದ್ವಾಂಸ ಸಕ್ತನಾಗ್ಯನವರತ
ಪರಿಪರಿಯ ಕರ್ಮ ಮಾಡುವನ್ಯಾವ್ಯಂಗೊ ಹಾಂಗೆ ಕೇಳ್
ಪರಮ ವಿದ್ವಾಂಸರಾಸಕ್ತಿಯಿಂ ಕರ್ಮ ಮಾಳ್ಪರು
ಲೋಕ ಸಂಗ್ರಹಾರ್ಥಾ ೨೪-೨೫

ಪದ ಅಟತಾಳ

ವಿದ್ಯಾವಂತನು ನಿತ್ಯ ಕರ್ಮ ಮಾಡದಲೆ ಅ
ವಿದ್ಯಾರ್ಹ ಕರ್ಮಸಂಗಿಗಳಾ

ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ
ಅಹಂಕಾರ ವಿಮೂಢಾತ್ಮಾ ಕರ್ತಾಽಹಮಿತಿ ಮನ್ಯತೇ ೨೭
ತತ್ತ್ವವಿತ್ತು ಮಹಾಬಾಹೋ ಗುಣಕರ್ಮ ವಿಭಾಗಯೋಃ
ಗುಣಾಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ೨೮

---

ಬುದ್ಧಿ ಭೇದವ ಹುಟ್ಟಿಸುವುದಲ್ಲಾ ಬಹು ವಿಧ
ಶುದ್ಧ ಕರ್ಮಗಳೆಲ್ಲ ನಿರುತಾ

ಆಚರಿಸುತಲು ಅವರಿಂದ ಕರ್ಮಗ
ಳಾಚರಣೆಯ ಮಾಡುವಂತೆ
ಸೂಚಿಸಿ ಕರ್ಮ ಮಾಡಿಸಬೇಕಲ್ಲದೆ ಕರ್ಮ
ನೀಚದ ಪರಿಯ ಹೇಳುವೆನು ೨೬

ಹರಿತಾನೇ ಪ್ರಕೃತಿಯು ಶಬ್ದವಾಚ್ಯನಾಗಿ
ನಿರುತ ಸರ್ವರ ಒಳಗಿದ್ದಾ
ಚರಿಸುವ ತ್ರಿಗುಣ ಸಂಬಂಧಾದ ಕರ್ಮಾಹಂ
ಕರಿಸಿ ವಿಮೂಢಾತ್ಮ ನರನು

ನಾನೇ ಮಾಡಿದೆ ಹೀನಾ ಉತ್ತಮ ಫಲ
ಕಾನೇ ಪಾತ್ರನು ಎಂದು ಕುತ್ಸಿತಾ
ಜ್ಞಾನಾವ ನರಿವ ನಾವನೊ ಅವ ಮಾಡುವ
ಹೀನ ಕರ್ಮಗಳೆಲ್ಲ ಸತತ ೨೭

ಗುಣಕರ್ಮ ಭೇದ ವಿಭಾಗವ ತತ್ವಜ್ಞ
ಮನುಜನಿಂದ್ರಿಯಗಳ ಸತತಾ
ಕ್ಷಣ ಕ್ಷಣ ಶಬ್ದಾದಿ ವಿಷಯಗಳಲಿ ಸದಾ
ಅನುವರ್ತಿಸುವುದೆಂದು ತಿಳಿದು

ಅವರಲ್ಲಿ ಕಟ್ಟು ಬೀಳನು ಮತ್ತು ಪ್ರಕೃತಿ ಗು
ಣದಿ ಸಮ್ಮೂಢ ಮಾನವನು

ಪ್ರಕೃತೇರ್ಗುಣ ಸಮ್ಮೂಢಾಃ ಸಜ್ಜಂತೇ ಗುಣಕರ್ಮಸು
ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನವಿಚಾಲಯೇತ್ ೨೯
ಮಯಿ ಸರ್ವಾಣಿ ಕರ್ಮಾಣಿ ಸನ್ಯಸ್ಯಾಧ್ಯಾತ್ಮ ಚೇತಸಾ
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತ ಜ್ವರಃ ೩೦
ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ೩೧

---

ಸದಾ ವಿಷಯಗಳೆಂಬ ಕರ್ಮ ಕಾಲದಿ ಸಿಕ್ಕಿ
ಮದಡನಾಹನು ಕೇಳು ಸತತ
ಬಲ್ಲವ ಕೃತ್ಸ್ನಜ್ಞಾರಲ್ಲದ ಮಂದಾರಿ
ಗೆಲ್ಲ ಚಲಿಸುವಂತೆ ಮತಿಯಾ
ಸಲ್ಲದು ಮಾಳ್ಪುದು ಇಂದಿರೆ ಅರಸ ವಿ
ಠಲ್ಲಾನ ಕೃಷ್ಣ ವೀ ಪರಿಯು ೨೮-೨೯

ಷಟ್ಪದೀ ತ್ರಿಪುಟತಾಳ

ಕರ್ಮ ಮಾಡಿಸುವ್ರವಕೆ ಕರ್ತನು
ಬೊಮ್ಮನೇ ನಾನಲ್ಲವೆನುತೀ
ನಿರ್ಮಲದ ಸುಜ್ಞಾನದಿಂದೀ ಸರ್ವ ಕರ್ಮಗಳ
ಹಮ್ಮನಗದೆನ್ನಲ್ಲಿ ಸ್ಥಾಪಿಸಿ
ನಿರ್ಮಮನು ಅಧ್ಯಾತ್ಮ ಚೇತನ
ಕರ್ಮಫಲದಿ ನಿರಾಶನಾಗ್ಯುದ್ಧಸ್ವ ನಿರ್ಭಯದಿ ೩೦

ಆವನೀ ಮತವನು ನಿರಂತರ
ಸೇವಿಸುವ ಮಾನವನು ಭಕ್ತಿಯ
ಭಾವದಿಂ ನಿರಸೂಯ ಯುತನಾದವನು ಕರ್ಮಗಳಾ
ಹಾವಳಿಂ ಬಿಡುಗಡೆಯನೈದುವ
ಆವನಿದರೊಳಸೂಯ ಯುತನಾ
ಗೀ ವಿಧದ ಮತ ಭಜಿಸದಿರುವನೊ ಅವನು ಪಾಪಿ ಸದಾ ೩೧

ಯೇ ತ್ವೇತದಭ್ಯಸೂಯಂತೋ ನಾನು ತಿಷ್ಠಂತಿ ಮೇ ಮತಮ್
ಸರ್ವಜ್ಞಾನ ವಿಮೂಢಾನ್ ತಾನ್ ವಿದ್ಧಿ ನಷ್ಟಾ ನಚೇತಸಃ ೩೨

ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇ ಜ್ಞಾನವಾನಪಿ
ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ೩೩

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ
ತಯೋರ್ನವಶಮಾಗಚ್ಛೇತ್ ತ್ಯಾಹ್ಯಸ್ಯ ಪರಿಪಂಥಿನೌ ೩೪

---

ಎಲ್ಲ ಜ್ಞಾನ ವಿಮೂಢ ಚೇತಸ
*ಹೊಲ್ಲೆಕೆಡುತಿಹ ನವನರಿಯ ಕೆಲ
ಕೆಲ್ಲರೀ (ಕೆಲರು) ಮತವನುಸರಿಸರೆಂತೆಂಬ್ಯ ನಿಜಹಟವು
ಬಲ್ಲಿದವರಂದದಲಿ ಚೇಷ್ಟಿಪ
ರಲ್ಲದಲೆ ತಿಳಿದಾಗ್ಯು ಯೋಗ್ಯತೆ
ಯಲ್ಲಿ ಚರಿಪರು ಪ್ರಾಣಿಗಳು ನಿಗ್ರಹವ ಮಾಡೇನೂ

ರಾಗದ್ವೇಷಗಳಿರುವ ವಿಷಯವ
ಭೋಗಿಸುತ ಕರಣಂಗಳದರೊಶ
ವಾಗಲಾಗದು ಈತನಿಗೆ ವೈರಿಗಳು ಕೇಳಿರಡು
ಈಗ ಕೇಳ್ಪರಧರ್ಮವನು ಚೆ
ನ್ನಾಗಿ ಆಚರಿಸುವುದಕಿಂತಲು
ಆಗುವುದು ಶ್ರೇಯಃ ಸ್ವಧರ್ಮಾಚರಣೆ ವಿಗುಣೋಪಿ

೩೨-೩೩-೩೪ ||

---

*ಹೊಲ್ಲೆ ಕೆಡುತಿಹ — (ಹೊಲೆ ಕೆಡುತಿಹ) = ಬಹಳ ಕೆಡುತ್ತಿರುವ

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ೩೫

ಅರ್ಜುನ ಉವಾಚ:—

ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ
ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ೩೬

ಶ್ರೀ ಭಗವಾನುವಾಚ:—

ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ೩೭

---

ಆರ್ಯಾ:—

ತನ್ನ ಧರ್ಮವಾಚರಿಸುತ ನಿಧನವು
ಇನ್ನು ಕೇಳು ಶ್ರೇಯಃಪ್ರದವೋ
ಅನ್ಯಧರ್ಮವಾಚರಿಸುತ ಬದುಕುವು
ದಿನ್ನು ಅತಿಶಯ ಭಯಪ್ರದವೋ ೩೫

ಶ್ಲೋಕ:—

ಈ ಪುರುಷನಾವ ಹೇತುವಿನ ಪ್ರಯುಕ್ತಾ
ಶ್ರೀಪತಿಯೆ ಇಚ್ಛಿಸದಲಿದ್ದಾಗ್ಯು ಸತತಾ
ಭೋಪರಿ (ಬಹುಪರಿ) ಬಲಾತ್ಕಾರ ಇವನಿಯೋಜಿತನೋ
ಪಾಪಗಳನಾರಿಚಪ ವಿಧವ ಕೇಳುವೆನೊ ೩೬

ಷಟ್ಪದೀ:—

ಕಾಮಕ್ರೋಧಗಳೆರಡು ಪು[illegible]
ನೇಮಿಸುವುದು ಕುಮಾರ್ಗದಲಿ ರಜೋ
ನಾಮಗುಣದಿಂದುದಿಸಿತಿದು ಮಹಾಪಾಪಿ ಬಹ್ವಾಶ

ಧೂಮೇನಾವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದ ಮಾವೃತಮ್ ೩೮

ಆವೃತಂ ಜ್ಞಾನ ಮೇತೇನ ಜ್ಞಾನಿನೋ ನಿತ್ಯವೈರಿಣಾ
ಕಾಮರೂಪೇಣ ಕೌಂತೇಯ ದೂಷ್ಪೂರೇಣಾಽನಲೇನಚ ೩೯

ಇಂದ್ರಿಯಾಣಿ ಮನೋಬುದ್ಧಿ ರಸ್ಯಾಧಿಷ್ಠಾನ ಮುಚ್ಯತೇ
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ೪೦

---

ಆ ಮಹಾ ಸದ್ಜ್ಞಾನ ಕೆಡಿಸುತ
ಪಾಮರರ ಮಾಡುವುದು ಪಾರ್ಥನೆ
ಈ ಮಹಾ ವೈರಿಗಳನರಿಯೆಂದನು ಮುರಧ್ವಂಸೀ ೩೭

ಹೊಗೆಯು ಮುಸುಕಿದ ವೀತಿಹೋತ್ರನು
ತೆಗೆಯದಿಹ ಮಲಯುಕ್ತ ದರ್ಪಣ
ಬಿಗಿದ ಮಾಸಿಂ ಗರ್ಭಮುಸುಕಿಪ್ಪಂತೆ ಚೇತನನಾ
ಹಗಲಿರುಳು ಆಚ್ಛಾದಿಸಿಹುದಿದು
ನಿಗಮ ತತ್ವ ಜ್ಞಾನ ಗೋಚರ
ಹೊರ್ಗೆಯೊ ದುರ್ವಿಷಯಾದಿ ಕಾಮಗಳೆಂದನಸುರಾರಿ ೩೮

ಎಲೆ ಧನಂಜಯ ತತ್ವವಿದರಿಗು
ತಿಳಿಯೆ ಸತತ ವಿರೋಧಿ ಎನಿಪುದು
ಹಲವು ವಿಷಯದ ಭೋಗ ಸಮಿಧೆಗಳಿಂದ ದಣಿಯದಿಹಾ
ಬಲುಹೆನಿಪ ಕಾಮಾಗ್ನಿಯಿಂದಲಿ
ಸಲೆ ಮುಸುಕಿಕೊಂಡಿಹುದು ಹೃದ್ಗತ
ಜಲರುಹೇಕ್ಷಣ ಹರಿಯು ತೋರಿಸದಂತೆ ಕೇಳೆಂದ ೩೯

ಪದ ಅಟತಾಳ

ಇಂದ್ರಿಯಂಗಳು ಮನೋಬುದ್ಧಿ ಈ ಕಾಮಕೆ
ಮಂದಿರವೆಂದ್ಹೇಳುತಿಹರೊ

ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ
ಪಾಪ್ಮಾನಂ ಪ್ರಜಹಿಹ್ಯೇನಂ ಜ್ಞಾನ ವಿಜ್ಞಾನ ನಾಶನಂ ೪೧

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ
ಮನಸಸ್ತು ಪರಾಬುದ್ಧಿರ್ಯೋಬುದ್ಧೇಃ ಪರತಸ್ತು ಸಃ ೪೨

ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ೪೩

---

ಮುಂದೆ ದೇಹಿಗಳ ಜ್ಞಾನವನಾಚ್ಛಾದಿಪುದಿದ
ರಿಂದ ಮೋಹವನೈದುತಿಹರೊ ೪೦

ಅದುಕಾರಣದಿ ನೀನು ಇಂದ್ರಿಯಗಳನೆಲ್ಲ
ಮೊದಲೇ ನಿಗ್ರಹಿಸೀ ಪಾಪಿಯನು
ಸದಮಲ ಜ್ಞಾನ ವಿಜ್ಞಾನ ನಾಶಕನನ್ನು
ಸದಾ ಗೆಲ್ಲು ಕಾಮಕ್ರೋಧವನು ೪೧

ಕರಣಗಳಧಿಕವೆಂಬುವರೊ ಅದರಕಿಂತ
ಪರ ಮನವೆನ್ನುತಲಿಹರೊ
ಪರಬುದ್ಧಿಯೆಂಬುವರದಕಿಂತಾ ದೇವನು
ಪರಮ ಉತ್ತಮನೆನ್ನುತಿಹರೊ ೪೨

ಈ ಪರಿ ಬುದ್ಧಿಯ ಶ್ರೇಷ್ಠತ್ವವರಿತು ನಾ
ನಾ ಪರಿ ಚಲಿಸದಂದದಲಿ
ಸ್ಥಾಪಿಸಿ ಬುದ್ಧಿಂದ ಮನವನು ನಿರುತವು
ಹಾ ಪ್ರಯತ್ನದಿ ವೈರಾಗ್ಯದಲಿ

ಕಾಮರೂಪ ದುರಾಸದ ಹಗೆಯವನನು
ಈ ಮಹಾ ಜ್ಞಾನ ಖಡ್ಗದಲಿ

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
ಕರ್ಮಯೋಗೋನಾಮ ತೃತೀಯೋಧ್ಯಾಯಃ

---

ನೇಮದಿ ಗೆಲ್ಲು ಇಂದಿರೆಪತಿ ವಿಠಲನ
ಧಾಮವಾಹುದು ಸತ್ವರದಲಿ ೪೩

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೆ "**ಗೀತಾರಂಜನಾ**"ಖ್ಯ ಗ್ರಂಥೆ
**ಕರ್ಮಯೋಗೋ**ನಾಮ
ತೃತೀಯೋಧ್ಯಾಯಃ



ಹರಿಃ ಓಂ

# ನಾಲ್ಕನೆಯ ಅಧ್ಯಾಯ

ಶ್ರೀ ಭಗವಾನುವಾಚ:—

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ೧

ಏವಂ ಪರಂಪರಾ ಪ್ರಾಪ್ತಮಿಮಂ ರಾಜರ್ಷಯೋ ವಿದುಃ
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ೨

ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ
ಭಕ್ತೋಽಸಿ ಮೇ ಸಖಾಚೇತಿ ರಹಸ್ಯಂ ಹ್ಯೇತದುತ್ತಮಂ ೩

ಪದ ಅಟತಾಳ

ನಾಶ ರಹಿತ ಇಂಥ ಯೋಗ ಮಾರ್ಗವ ನಾನು
ಆ ಸರಸಿಜ ಸಖ ಗೊರೆದೆ
ಆ ಸರಸಿಜ ಸಖ ತನ್ನ ಕುಮಾರನಾ
ದಾಶ್ರಾದ್ಧದೇವ ಗ್ಹೇಳಿದನು
ಮನು ತನ್ನ ಕುವರನಾದಿಕ್ಷ್ವಾಕುರಾಯಗಿ
ದನೆ ಹೇಳಿದನು ಹೀಗೆ ಬರುತಾ
ಘನಯೋಗ ಜ್ಞಾನ ಪರಂಪರಾ ಪ್ರಾಪ್ತಿದೂ
*ಜನಪಋಷಿಗಳರಿತಹರೊ

ಬಹುಕಾಲ ಗತಿಸಿದ ಕಾರಣೀ ಜ್ಞಾನವು
ಇಹುಲೋಕದಲಿ ನಷ್ಟವಾಗಿ
ಇಹದದೆ ಅದು ಈಗ ಎನ್ನಿಂದ ನಿನಗುಕ್ತ
ಮಹಯೋಗವಿದು ಪುರಾತನವೊ

* ಜನಪ ಋಷಿಗಳು = ರಾಜರ್ಷಿಗಳು.

ಅರ್ಜುನ ಉವಾಚ:—

ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ
ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ೪

ಶ್ರೀ ಭಗವಾನುವಾಚ:—

ಬಹೂನಿಮೇ ವ್ಯತೀತಾನಿ ಜನ್ಮಾನಿ ತವಚಾರ್ಜುನ
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ೫
ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ೬

---

ಎನಗೆ ನೀ ಸಖ ಮತ್ತು ಭಕ್ತನೆಂದೆನುತ ಈ
ಘನಗೋಪ್ಯ ಉತ್ತಮ ಜ್ಞಾನಾ
ನಿನಗ್ಹೇಳಿದೆನೊ ಇಂದಿರೇಶ ವಿಠಲ ನಾನೆ
ಅನುದಿನ ಭಕ್ತ ರಕ್ಷಕನೊ (೧-೪)

ಷಟ್ಪದೀ ತ್ರಿಪುಟತಾಳ

ಅರ್ಜುನ:—

ರವಿಯ ಜನ್ಮವು ಪೂರ್ವದಲಿ ಕೇ
ಳವನಿಯೊಳು ನೀ ಜನಿಸಿದುದು ಬಳಿ
ಕವಗೆ ನೀ ಹೇಳಿದೆನು ಯೋಗವಿದೆಂಬ ವಾಕ್ಯವನು
ಕವಿಭಿರೀಡಿತ ಕಮಲ ಸಂಭವ
ಭವಮುಖಾರಾಧಿತನೆ ಇದ ಮಾ
ಧವನೆ ಹೇಗರಿಯಲಿ ಎನಗೆ ಹೇಳೆಂದನಾ ಪಾರ್ಥ ೪

ಪದ ಅಟತಾಳ

ಹಿಂದೆ ಬಹು ಜನ್ಮಗಳು ಗತಿಸಿಹುವು ಎನಗೂ ನಿನಗೂ
ಛಂದವಾಗಿವೆಲ್ಲಾ ನಾನೂ ಬಲ್ಲೆ ನೀನರಿಯೆಯೋ
ಎಂದೂ ಜನ್ಮವಿಲ್ಲಾದವ್ಯಾಯಾತ್ಮಾ ಪ್ರಾಣಿಗಳಿಗೊಡೆಯಾ
ವಂದ್ಯಾನಾದಾಗ್ಯೂ ಮನ್ಮಾಯಾದಿಂದಾ ಧರೆಯಲ್ಲೀ ೧

ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನ ಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್ ೭
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ೮
ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿಮಾಮೇತಿ ಸೋಽರ್ಜುನ ೯
ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ
ಬಹವೋ ಜ್ಞಾನತಪಸಾ ಪೂತಾ ಮದ್ಭಾವ ಮಾಗತಾಃ ೧೦

---

ಅಪರ ಪ್ರಕೃತೀ ಸಂಬಂಧಾದ ವಸುದೇವಾದಿಗಳ ದೇಹಾ
ನೆಪಕೆ ನಿಮಿತ್ತಾನವಮಾಡಿ ವ್ಯಕ್ತಾನಾಹೆನೋ
ದ್ರುಪದಾಜಾವಲ್ಲಭನೆ ಆವಾವಾ ಕಾಲಕೆ ಧರ್ಮಗ್ಲಾನಿ
ಅಪರಿಮಿತಾ ಧರ್ಮಾಕಭಿವೃದ್ಧಿಯಾಹುದೋ ೨

ಅರ್ಜುನಾನೆ ಕೇಳೋ ಆಗ ವ್ಯಕ್ತನಾಹೆ ದುಷ್ಕೃತಾರ
ಭರ್ಜನಾರ್ಥಾ ಸಾಧುಗಳಾ ರಕ್ಷಣಾರ್ಥದೀ
ಸಜ್ಜನಾರಲ್ಲಿ ಧರ್ಮ ಸಂಸ್ಥಾಪನಾರ್ಥ ಯುಗಯುಗದಿ
ಸರ್ಜನಾ ಮಾಡುವೆ ಸ್ವಾಂಶಾವೆಂದನಸುರಾರಿ ೩

ಎನ್ನ ದಿವ್ಯ ಜನ್ಮ ಕರ್ಮಾ ಪೂರ್ವೋಕ್ತದಂದಾದಿ ಆವಾ
ತನ್ನ ಯೋಗ್ಯತಾನುಸಾರ ನಿಶ್ಚಯ ಜ್ಞಾನಾವನ್ನೆ
ಬಲ್ಲಾವನು ದೇಹ ಬಿಟ್ಟಮೇಲೆ ಮರಳಿ ಕೇಳು
ಜನ್ಮವೈದವಲೆ ಎನ್ನನೈದುತಿಹನೊ ೪

ರಾಗ ಕ್ರೋಧ ಭಯಗಳನ್ನು ನೀಗಿ ನನ್ನಾನಾಶ್ರೈಸಿ ಮನ್ಮನ
ರಾಗಿ ಬಹಳ ಜನರೂ ಜ್ಞಾನ ತಪಸೀನಿಂದಲಿ
ಆಗಿ ಪೂತಾರು ಮದ್ಭಾವಾನೈದಿ ಸುಖಿಸುವರು ಆವಾ
ನ್ಯಾಯಗೆ ಎನ್ನ ಭಜಿಸುವನೊ ಹಾಂಗೆ ಅವನನ್ನು ೫

ಯೇ ಯಥಾಮಾಂ ಪ್ರಪದ್ಯಂತೇ ತಾಂ ಸ್ತಥೈವ ಭಜಾಮ್ಯಹಂ
ಮಮ ವರ್ತ್ಮಾನು ವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ೧೧

ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹದೇವತಾಃ
ಕ್ಷಿಪ್ರಂಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ೧೨

ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ
ತಸ್ಯಕರ್ತಾರಮಪಿಮಾಂ ವಿದ್ಧ್ಯಕರ್ತಾರ ಮವ್ಯಯಮ್ ೧೩

ನಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮ ಫಲೇಸ್ಪೃಹಾ
ಇತಿಮಾಂ ಯೋಽಭಿಜಾನಾತಿ ಕರ್ಮಭಿರ್ನಸ ಬದ್ಧ್ಯತೇ ೧೪

---

ಭಜಿಸೂವೆನದು ಕಾರಾಣೆನ್ನ ಮಾರ್ಗವನ್ನೆ ಸರ್ವ ಜನರು
ಅಜಸ್ರಾನುವರ್ತಿಪರೊ ಪಾಂಡವನೆ ಕೇಳಿನ್ನೂ
ಕುಜನಾರೆನ್ನರಿಯಾದೆ ಕರ್ಮಾಫಲ ಸಿಧ್ಯಾಪೇಕ್ಷಿತರಾಗಿ
ಭಜಿಸುವರನ್ಯಾ ದೇವತೆಗಳನ್ನೆ ಲೋಕಾದಿ ೬

ತ್ವರದಿ ಮಾನುಷ್ಯ ಲೋಕದಿ ಸಿದ್ಧಿಯಹುದು ಕರ್ಮಫಲಾ
ಸುರರೊಳು ನಾಸಿದೂ ಕೊಡುವೆನೆಂಬ ಗೋಪ್ಯಾವೂ
ನರನೆ ಕೇಳು ನಾಲ್ಕು ಗುಣ ಕರ್ಮ ವಿಭಾಗಗಳನ್ನೂ
ಧರೆಯೊಳೆನ್ನಿಂದೇವೇ ಉದಸೀತದಕೆ ಕರ್ತಾನಾ ೭

ಇನ್ನು ಎನಗಾರೂ ಕರ್ತಾರು ಇಲ್ಲಾದಾರಿಂದ ಅಕರ್ತಾ
ನೆನ್ನುತಿಹರೆನ್ನ ನಾಶರಹಿತನೆಂದು ತಿಳಿಯೊ ಪಾರ್ಥನೆ
ಪನ್ನಗಾಶಯನ ಇಂದಿರೇಶ ವಿಠಲಾ ಸರ್ವಾರಲ್ಲಿ
ಪೂರ್ವಾನಾಗಿ ಕರ್ಮಗಳ ಮಾಡಿಸುವೆನಾದರೂ ೮

(೫-೧೩)

ಷಟ್ಪದೀ:—

ಎನ್ನ ನೀ ಕರ್ಮಗಳು ಲೇಪಿಸವು ಎನಗಿಲ್ಲ
ಉನ್ನತದ ಕರ್ಮಫಲದಲಿ ಸ್ಪೃಹೆಯು ಹೀಂಗೆ ಕೇ
ಳಿನ್ನ ಆವಾತ ಬಲ್ಲನೊ ಆತ ಕರ್ಮದಿಂದಿನ್ನು ಬಂಧಿತನಾಗನೂ

ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ
ಕುರುಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ ೧೫

ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರಮೋಹಿತಾಃ
ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ೧೬

ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂಚ ವಿಕರ್ಮಣಃ
ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ೧೭

---

ಮುನ್ನ ಈ ವಿಧವರಿತು ಮಾಡಲಪ್ಪಟ್ಟಿತ್ತೈ
ಉನ್ನತದ ಸತ್ಕರ್ಮಗಳು ಮುಮುಕ್ಷುಗಳಿಂದ
ಇನ್ನು ತಸ್ಮಾತು ಪೂರ್ವಾಪೂರ್ವದಿಂದ ಕೃತ ಘನ್ನಕರ್ಮವ
ಮಾಡು ನೀ ೧೪-೧೫

ಶ್ಲೋಕ:—

ಕರ್ಮವ್ಯಾವುದು ಮಾಡೆ ಜಗದೊಳಕರ್ಮವ್ಯಾವುದು ಇಂತು ತ
ತ್ಕರ್ಮವನು ತಿಳಿವಲ್ಲಿ ಮೋಹಿತರಹರು ಕೋವಿದರಾವರೂ
ಕರ್ಮವಾವುದನರಿದಮಂಗಳಕರ್ಮಬಂಧವ ಹರಿವೆ ಆ
ಮರ್ಮವನು ನಿನಗ್ಹೇಳುವೆನು ಅದನರಿಯೊ ಫಲ್ಗುಣನೆ ೧೬

ಆರ್ಯಾ:—

ಕರ್ಮಜ್ಞಾನವಹುದು ಅತಿ ಕಠಿಣವು
ಧರ್ಮಜಾನುಜ ಕೇಳೊರೆಯುವೆನು
ಕರ್ಮವಾವುದಾಕರ್ಮವಾವುದು ವಿ
ಕರ್ಮವಾವುದೆಂಬುದ ತಿಳಿಯೈ ೧೭

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿಚ ಕರ್ಮ ಯಃ
ಸಬುದ್ಧಿಮಾನ್ ಮನುಷ್ಯೇಷು ಸಯುಕ್ತಃ ಕೃತ್ಸ್ನ ಕರ್ಮಕೃತ್ ೧೮

ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪ ವರ್ಜಿತಾಃ
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ೧೯

---

ಅಷ್ಟಪದೀಗದ್ಯಾ:—

ನಿರುತ ತಾನಾಚರಿಪ ಸಕಲ ಕರ್ಮಗಳಲ್ಲಿ
ಹಿರಿದು ಕರ್ತೃತ್ವ ತನಗಿಲ್ಲದಿಹ ಕಾರಣದಿ
ಹರಿಯೆ ಮಾಡಿಸುವವನು ತಾ ಮಾಡುವವನಲ್ಲ
ಎಂದರಿವ ನರನಾವನೊ

ನಿರುತ ಜೀವನ ಕ್ರಿಯಾ ಕರಣಂಗಳಿಲ್ಲದಿಹ
ನೆರೆ ಸುಷುಪ್ತ್ಯಾದ್ಯವಸ್ಥೆಗಳೊಳಿದ್ದಾಗಲೂ
ಪರಮೇಶ್ವರನೆ ಸರ್ವ ಕಾರ್ಯಗಳ ಕರ್ತೃವೆಂ
ದರಿವ ಮಾನವನಾವನೋ ೧೮

ಧರೆಯೊಳಗೆ ಬುದ್ಧಿಯುಕ್ತನು ಕೇಳು ಪಂಡಿತನು
ನರನೆ ಕೇಳಾತನೇ ಯೋಗಯುಕ್ತನು ಅವನೆ
ಪರಿಪರಿಯ ಸರ್ವ ಕರ್ಮಗಳಾಚರಿಸಿದವನೊ
ನರಲೋಕದೊಳು ಪೂಜ್ಯನೊ

ಅರಿತು ಈ ವಿಧವ ಸರ್ವಾರಂಭ ಕರ್ತೃತ್ವ
ಜರಿಮು ತತ್ಫಲ ಕಾಮು ಸಂಕಲ್ಪ ವರ್ಜಿತವ
ಪರಮ ಜ್ಞಾನಾಗ್ನಿಯಿಂ ದಗ್ಧಕರ್ಮಗಳುಳ್ಳ
ಪುರುಷ ಪಂಡಿತನೆಂಬರೋ ೧೯

ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ
ಕರ್ಮಣ್ಯಭಿ ಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ೨೦

ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ
ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ೨೧

ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ
ಸಮಸ್ಸಿದ್ಧಾವ ಸಿದ್ಧೌಚ ಕೃತ್ವಾಽಪಿ ನ ನಿಬಧ್ಯತೇ ೨೨

---

ಆದುಕಾರಣದಿ ಕರ್ಮಫಲ ಸಂಗಬಿಟ್ಟು ನಿ
ತ್ಯದಿ ತೃಪ್ತ ನಿರ್ಗತಾಶ್ರಯನು ಬಹುವಿಧ ಕರ್ಮ
ಸದಮಾಡಲು ಪ್ರವೃತ್ತೋಽಪಿ ಕಿಂಚಿತ್ಕರ್ಮ
ವಿದು ಮಾಡಲಿಲ್ಲಾತನೂ

ಇದರಂತೆ ನಿಯಮಿಸಿದ ಚಿತ್ತಾತ್ಮ ಕರ್ಮಫಲ
ಪ್ರದವಾಹದೆಂಬ ಈ ದುಷ್ಪ್ರತಿಗ್ರಹ ಬಿಟ್ಟು
ಇದರಾಶ ಮಾಡದೆ ದೇಹ ಪೋಷಣ ನಿಮಿ
ತ್ತದಲಿ ಕೇವಲ ಕರ್ಮವಾ

ಅನುದಿನದಿ ಮಾಡುತಿದ್ದರು ಪಾಪವೈದನ
ರ್ಜುನ ಯದೃಚ್ಛಾಲಾಭ ಸಂತುಷ್ಟ ವಿಷಯದೊ
ಳನವರತ ಬಪ್ಪ ದ್ವಂದ್ವಾತೀತ ಮತ್ಸರವು
ಜನರೊಳಿಲ್ಲದ ಪುರುಷನು

ಅನುಕೂಲಿಸಿದರು ಸಿದ್ಧಿಸದಿದ್ದರಾದರೂ
ಘನಹರುಷ ದುಃಖಪಡದಂತೆ ಸಮನಾಗಿರುವ
ವನು ಕರ್ಮಗಳ ಮಾಡಿದಾಗ್ಯಾರು ಆದರಿಂದೆ
ವನು ಬದ್ಧನಾಗ ಕೇಳ್ಳೈ (೨೦-೨೧-೨೨)

ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತ ಚೇತಸಃ
ಯಜ್ಞಾ ಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ೨೩

ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾಹುತಮ್
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮ ಸಮಾಧಿನಾ ೨೪

ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ೨೫

---

ಷಟ್ಪದಿ ತ್ರಿಪುಟತಾಳ

ಕರ್ಮಫಲದಲಿ ಸಂಗಗತನಾ
ಗ್ದುರ್ಮ್ಮನುಳಿದನುದಿನದಿ ಮಾಡುವ
ಕರ್ಮಬಂಧದಿ ಮುಕ್ತನಹ ಈ ಜ್ಞಾನವುಳ್ಳವಗೆ
ಕರ್ಮಯದ್ವತು ಆಚರಿಸುವುದು
ಧರ್ಮವಾಹುದ ನಿತ್ಯಫಲದಿಂ
ನಿರ್ಮಮಗೆ ಬಂಧಿಸದು ಕೆಡುತಿಹುದಲ್ಲ ಕೇಳೆಂದ ೨೩

ಬ್ರಹ್ಮ ಕರ್ಮ ಸಮಾಧಿಯೆಂಬೀ
ಧರ್ಮದಿಂದ ನಿರಂತರದಿ ಪರ
ಬ್ರಹ್ಮನಗ್ನಿಹವಿಸ್ಸು ಯಜ್ಞದ ಕರ್ತನೊಳು ನಿಂತು
ಬ್ರಹ್ಮನೇ ಮಾಡಿಸುವನೆಜ್ಞವ
ಬ್ರಹ್ಮನಿಗೆ ಪ್ರೀತ್ಯರ್ಥವೆನುತಲಿ
ಬ್ರಹ್ಮಕರ್ಮಾಚರಿಸಿದವ ಪರಬ್ರಹ್ಮನೈದುವನೊ ೨೪

ಪದ ರಾಗ ರೇಗುಪ್ತಿ ಆಟತಾಳ

ಕೇಳು ಪಾರ್ಥನೆ ಹೀಂಗೆ ಬಹುಧಾ, ನಾನು
ಹೇಳುವೆ ಮಾಳ್ಪ ಕರ್ಮದ ಭೇದಾ ಪ.

ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ
ಶಬ್ದಾದೀನ್ ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ೨೬
ಸರ್ವಾಣೀಂದ್ರಿಯ ಕರ್ಮಾಣಿ ಪ್ರಾಣಿ ಕರ್ಮಾಣಿ ಚಾಪರೇ
ಆತ್ಮಸಂಯಮ ಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ೨೭
ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಽಪರೇ
ಸ್ವಾಧ್ಯಾಯ ಜ್ಞಾನಯಜ್ಞಾಶ್ಚ ಯತಯ ಶ್ಯಂಸಿತವ್ರತಾಃ ೨೮

---

ಈ ಲೋಕದಲಿ ಕೆಲವರು ಯೋಗಿಗಳು ಹೃದ
ಯಾಲಯದಲಿ ಇಪ್ಪ *ಯಜ್ಞಾನರ್ಚಿಪರಿದ ಅ. ಪ.

ಕೆಲವರು ತಾವಾಚರಿಪ ಯಜ್ಞಾದಿ ಕರ್ಮ
ಗಳನು ನಿಶ್ಚಲ ಮತಿಯಿಂದಲಿ
ಹಲಧರನನುಜನ ಪ್ರೀತ್ಯರ್ಥ ಬ್ರಹ್ಮಾ
ಗ್ನಿಲಿ ಹೋಮಿಪರೈ ಕೇಳ್ಬುಧರು ೧

ಮತ್ತೆ ಕೆಲರು ಕೇಳ್ಚಿತ್ತ ನಿರೋಧದಿ
ಶ್ರೋತ್ರಾದಿಂದ್ರಿಯಗಳ ನೆರೆ ಜಯಿಸಿ
ಸತ್ವಸ್ಥರಾಗಿ ನಿಯಮವೆಂಬ ಜ್ವಲನನೊಳ್
ನಿತ್ಯದಿ ಹೋಮಿಸುತಿಹರು, ಧೀಯುತರು ೨

ಹಲವು ಶಬ್ದಾದಿ ವಿಷಯವನ್ನು, ಕೇಳು
ಕೆಲರು ಇಂದ್ರಿಯವೆಂಬ ಅಗ್ನಿಲಿ ಇನ್ನೂ
ಕೆಲಕಾಲ ಹೋಮಿಸುತಿಹರು ಸರ್ವೇಂದ್ರಿಯಾ
ದಲಿ ಮಾಳ್ಪ ಕರ್ಮಗಳ ಪ್ರಾಣಕರ್ಮಗಳಾ ೩

ಕೆಲರು ಹರಿಯು ತಾನೆ ಸರ್ವ ಸ್ವತಂತ್ರನೆಂ
ಬ-ಮಲಜ್ಞಾನದಿಂದ ಪ್ರಕಟವಾದ
ಸುಲಲಿತ ಮನ ನೆಲೆಗೊಳಿಸುವ ಯೋಗ
ಜ್ವಲನನೊಳಿದ ಹೋಮಿಸುತಿಹರೈ ೪

---

*ಯಜ್ಞನ = ಪರಮಾತ್ಮನನ್ನು

ಅಪಾನೇ ಜುಹ್ವತಿಪ್ರಾಣಂ ಪ್ರಾಣೇಽಪಾನಂ ತಥಾಽಪರೇ
ಪ್ರಾಣಾಪಾನ ಗತೀರುದ್ಧ್ವಾ ಪ್ರಾಣಾಯಾಮ ಪರಾಯಣಾಃ ೨೯
ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ
ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತ ಕಲ್ಮಷಾಃ ೩೦
ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ೩೧
ಏವಂ ಬಹುವಿಧಾ ಯಜ್ಞಾವಿತತಾ ಬ್ರಹ್ಮಣೋ ಮುಖೇ
ಕರ್ಮಜಾನ್ ವಿದ್ಧಿತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ೩೨

---

ಮತ್ತೆ ಕೆಲರು ಕೇಳ್ ಚಿತ್ತ ಶುದ್ಧಿಯಲಿ
ವಿತ್ತದಿ ಆಜ್ಯಾದಿಗಳನೆ ಪಡೆದು
ಉತ್ತಮ ಪರಿಯಿಂ ವಿರಚಿಪರ್ಯಜ್ಞವ
ವಿತ್ತ ಯಜ್ಞವೆಂಬರು ಇವ ಬುಧರು ೫

ಇನ್ನು ಕೆಲರು ತಪೋ ಯಜ್ಞವ ಮಾಳ್ಪ
ರಿನ್ನು ಕೆಲರು ಯೋಗ ಯಜ್ಞವನೂ
ಇನ್ನು ಕೆಲರು ಸ್ವಾಧ್ಯಾಯ ಜ್ಞಾನವೆಂಬ
ಘನ್ನ ಯಜ್ಞಗಳ ವಿರಚಿಪ ವ್ರತಿಗಳೊ ೬

ಪ್ರಾಣನಪಾನದಿ ಹೋಮಿಸೀ, ಮತ್ತೆ
ಪಾನನ ಪ್ರಾಣದಿ ಹೋಮಿಸಿ
ಪ್ರಾಣಾಪಾನದ ಗತಿ ನಿಯಮಿಸಿ ನಿರುತಾದಿ
ಪ್ರಾಣಾಯಾಮ ಪರಾಯಣರು ಕೆಲರು ಮತ್ತು ೭

ಮತ್ತೆ ಕೆಲರು ನಿಯತಾಹಾರದಿದೇಹ
ಬತ್ತಿಸಿ ಪ್ರಾಣವ ಪ್ರಾಣದೀ
ಮೊತ್ತದೊಳ್ಹೋಮಿಸುವರು ಯಜ್ಞವಿದರೆಲ್ಲ
ಉತ್ತಮ ಯಜ್ಞದಿಂದಲಿ ಪಾಪಕ್ಷಪಿತರೊ ೮

ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ೩೩

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನ ಸ್ತತ್ತ್ವದರ್ಶಿನಃ ೩೪

---

ನರನಾವಾ ಯಜ್ಞಸಿಷ್ಟಾಮೃತವಾದಾ
ನಿರುತ ವಿಷಯವಾ ಭೋಗಿಸುವಾ ತಾ
ಪರಮ ಸನಾತನ ಬ್ರಹ್ಮನ್ನೈದುವ ಅಯ
ಜ್ಞರಿಗಿಲ್ಲ ಈ ಲೋಕವನ್ಯವೆತ್ತಣದಯ್ಯ ೯

ಈ ವಿಧ ಬಹುವಿಧ ಯಜ್ಞವು ಹೊರ
ಟಾವು ಬೊಮ್ಮನ ಮುಖದಿಂದಿವು
ಭಾವಿಸಿವೆಲ್ಲವು ಕರ್ಮಕಾಂಡದಿ ಹುಟ್ಟಿ
ದಾವೆಂದು ತಿಳಿ ಹೀಗೆ ತಿಳಿದ್ಯಾ ಮೋಕ್ಷವನ್ನೈದಿ ೧೦

ದ್ರವ್ಯಮಯಾದ್ಯಜ್ಞಗಳಕಿಂತ ಕೇಳೋ
ಸವ್ಯಸಾಚಿಯೆ ಮೋಕ್ಷಪ್ರದವಿಂಥಾ
ಅವ್ಯಯಜ್ಞಾನ ಯಜ್ಞವು ಜ್ಞಾನದಲಿ ಸರ್ವ
ಅವ್ಯಕ್ತವ್ಯಕ್ತ ಕರ್ಮಗಳ ಪೂರ್ತಿಸುವುದು ೧೧

ಈಪರಿ ಜ್ಞಾನಯಜ್ಞದವಿಧಾ ಇಂದಿ
ರಾಪತಿ ವಿಠ್ಠಲನವರ ಸದಾ
ಭೋಪರಿ (ಬಹುಪರಿ) ಪ್ರಣಿಪಾತದಿಂದ ಪ್ರಶ್ನೆಗಳಿಂದ
ಅಪಷ್ಟು ಸೇವಿಸುತ್ತಿರಿ ಹೇಳುವರು ಜ್ಞಾನ ೧೨

(೩೩-೩೪)

ಯಜ್ಜ್ಞಾತ್ವಾ ನಪುನರ್ಮೋಹಮೇವಂ ಯಾಸ್ಯಸಿ ಪಾಂಡವ
ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ೩೫
ಅಪಿ ಚೇದಸಿ ಪಾಪೇಭ್ಯ ಸ್ಸರ್ವೇಭ್ಯಃ ಪಾಪಕೃತ್ತಮಃ
ಸರ್ವಂಜ್ಞಾನ ಪ್ಲವೇನೈವ ವೃಜಿನಂ ಸಂತರಿಷ್ಯಸಿ ೩೬
ಯಥೈಧಾಂಸಿ ಸಮಿದ್ಧೋಽಗ್ನಿ ರ್ಭಸ್ಮಸಾತ್ಕುರುತೇಽರ್ಜುನ
ಜ್ಞಾನಾಗ್ನಿಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ೩೭

---

ಅಷ್ಟಪದೀಗದ್ಯಾ:—

ಅರಿತಾವದೀಮೋಹ ಮರಳಿ ಯೆಂದಿಗೂನೈದೆ
ಪರಿಪರಿಯ ಕರ್ಮ ಕರ್ತೃತ್ವ ನಿನ್ನಲಿ ಇದ್ದ
ಪರನಾದ ಎನ್ನೊಳ್ಖ್ಯಗನವರತ ಭಾವಿಸುವ
ತೆರನಂತಶೇಷವಾದಾ

ಸರಸಿಜಾಸನ ಮೊದಲು ಸ್ತಂಭಾಂತ ಪ್ರಾಣಿಗಳು
ಪರತಂತ್ರರೆಂದು ಕಾಣುವಿ ಹೀಗೆ ಭಾವಿಸುತ
ನಿರುತ ನೀ ಪಾಪ ಕರ್ಮಗಳನಾಚರಿಸಿದರು
ನರಕಾದ್ಯನರ್ಥವಿಲ್ಲಾ ೩೫

ಷಟ್ಪದಿ:—

ಎಲೆ ಧನಂಜಯ ಸರ್ವ ಪಾಪಿ
ಗಳೊಳಗೆ ನೀ ಕಡು ಪಾಪಿಯಾಗಿರೆ
ತಿಳಿಯೊ ನೀ ಮಾಡಿದ ಮಹಾ ಪಾತಕವು ಮೊದಲಾದ
ಜಲನಿಧಿಯೊಳತ್ಯಂತ ನಿಜ ನಿ
ರ್ಮಲದ ತತ್ವಜ್ಞಾನವೆಂಬೀ
ಹೊಳೆವ ತೆಪ್ಪದಿ ಪಾಪವನು ದಾಂಟುವೆಯೊ ನೀನೆಂದ ೩೬

ಜ್ವಲಿಸುತಿಹ ಪಾವಕನು ಕಟ್ಟಿಗೆ
ಗಳನೆ ಭಸ್ಮವ ಮಾಡುವಂದದಿ
ಹಲವು ಕರ್ಮಗಳನ್ನು ಜ್ಞಾನಾಗ್ನಿಯು ನಿರಂತರದಿ

ನಹಿ ಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೇ
ತತ್ಸ್ವಯಂ ಯೋಗ ಸಂಸಿದ್ಧಃ ಕಾಲೇನಾತ್ಮನಿ ವಿಂವತಿ ೩೮

ಶ್ರದ್ಧಾವಾನ್ ಲಭತೇ ಜ್ಞಾನಂ ಮತ್ಪರಸ್ಸಂಯತೇಂದ್ರಿಯಃ
ಜ್ಞಾನಂ ಲಬ್ಧ್ವಾ ಪರಾಂ ಶಾಂತಿ ಮಚಿರೇಣಾಧಿಗಚ್ಛತಿ ೩೯

ಅಜ್ಞಶ್ಚಾ ಶ್ರದ್ಧಧಾನಶ್ಚ ಸಂಶಯಾತ್ಮಾ ವಿನಶ್ಯತಿ
ನಾಯಂ ಲೋಕೋಽಸ್ತಿ ನಪರೋ ನಸುಖಂ ಸಂಶಯಾತ್ಮನಃ ೪೦

---

ಫಲಿಸದಂದದಿ ಸುಟ್ಟು ಭಸ್ಮಂ
ಗಳನೆ ಮಾಳ್ಪುದು ಕೇಳು ಪಾರ್ಥನೆ
ಬಳಿಕ ಮತ್ತೊಂದಿಲ್ಲ ಬಾಧಕವೆಂದನಸುರಾರಿ ೩೭

ವರ ಸುತತ್ವಜ್ಞಾನ ದೀಪ್ತಿಗೆ
ಸರಿಯೆನಿಪ ಪಾವನವು ಧರೆಯಲಿ
ಪಿರಿದು ಮತ್ತೊಂದಿಲ್ಲ ವಿದರಿಂದ್ಹೃದಯ ವಾಸಿಯಹ
ಹರಿಯ ನಿನ್ನಲಿ ಕಾಂಬ ಕಾಲಾಂ
ತರದಿ ಈ ಪರಿಯೊಳಗೆ ಸಿದ್ಧಿಯ
ತ್ವರದಿ ನೈದುವಿ ಪಾರ್ಥ ಕೇಳೆಂದನು ರಮಾಧವನು ೩೮

ಮೊದಲು ಎನ್ನಲಿ ಭಕ್ತಿಯುಕ್ತನಿ
ಗೊದಗುವುದು ನಿಗಮಾರ್ಥ ಜ್ಞಾನವು
ಅದಕನಂತರ ಇಂದ್ರಿಯಂಗಳ ನಿಗ್ರಹವಮಾಡಿ
ಚದರದಂದದಿ ಯೋಗಿಯಾಗುವ
ಅದರ ಬಳಿಕಪರೋಕ್ಷ ಜ್ಞಾನವ
ಇದ ಪಡೆದು ಉತ್ಕೃಷ್ಟ ಶಾಂತಿಯ ತ್ವರದಿ ನೈದುವನೋ ೩೯

ಜ್ಞಾನವಿಲ್ಲದ ಮನುಜ ಭಕ್ತಿ ವಿ
ಹೀನನಾದವ ಶಾಸ್ತ್ರಗುಹ್ಯ
ಜ್ಞಾನವಿಲ್ಲದ ಸಂಶಯಾತ್ಮನು ಕೆಡುತಿಹನು ಕೇಳ್ನ

ಯೋಗ ಸಂನ್ಯಸ್ತ ಕರ್ಮಾಣಂ ಜ್ಞಾನಸಂಛಿನ್ನ ಸಂಶಯಮ್
ಆತ್ಮವಂತಂ ನಕರ್ಮಾಣಿ ನಿಬಧ್ನಂತಿ ಧನಂಜಯ ೪೧

ತಸ್ಮಾದಜ್ಞಾನ ಸಂಭೂತಂ ಹೃತ್ಸ್ಥಂ ಜ್ಞಾನಾಸಿನಾಽಽತ್ಮನಃ
ಛಿತ್ತ್ವೈನಂ ಸಂಶಯಂ ಯೋಗ ಮಾತಿಷ್ಠೋತ್ತಿಷ್ಠ ಭಾರತ ೪೨

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಜ್ಞಾನಯೋಗೋ**ನಾಮ ಚತುರ್ಥೋಽಧ್ಯಾಯಃ

---

ಏನು ವರದೊರದ್ಹೇಳಲಾತನ
ಮಾನಸದ ಸಂದೇಹವಳಿಯದೊ
ಆ ನರಗೆ ಇಹಲೋಕ ಪರಲೋಕದಲಿ ಸುಖವಿಲ್ಲ ೪೦

ಜ್ಞಾನಯೋಗವನರಿತು ಕರ್ಮಗ
ಳೀನ ಮಾಡುವದೆಲ್ಲ ಹರಿಯಾ
ಧೀನವೆಂಬೀ ಯೋಗದಿಂ ಸನ್ಯಸ್ತ ಕರ್ಮಗಳ್ಳಾ
ಮಾನವಗೆ ಪರಮಾತ್ಮ ಮೂರ್ತಿ
ಜ್ಞಾನದಿಂ ಸಂಛಿನ್ನ ಸಂಶಯ
ಜ್ಞಾನವುಳ್ಳಾತ್ಮಜ್ಞನನು ಕರ್ಮಗಳು ಬಂಧಿಸವೂ ೪೧

ಆರ್ಯಾ:—

ಅದುಕಾರಣ ಅಜ್ಞಾನದಿ ಜನಿಸಿಹ ಹೃದಯಸ್ಥಿತ ಸಂಶಯವನ್ನೂ
ಮಡನಾಗದಲೆ ಜ್ಞಾನಖಡ್ಗದಲಿ ಮುದದಿ ಛೇದಿಸಿ ಏಳಿನ್ನೂ
ಇಂದಿರೇಶ ವಿಠಲನು ಈ ವಿಧದಲಿ ಇಂದು ಪಾರ್ಥಗುಪದೇಶವನೆ
ಚಂದದಿ ಮಾಡಿದ ಧೃತರಾಷ್ಟ್ರನೆ ಕೇಳೆಂದು ನುಡಿದ ಸಂಜಯನಿದನೆ ೪೨

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೆ **"ಗೀತಾರಂಜನಾ"**ಖ್ಯ ಗ್ರಂಥೆ
**ಜ್ಞಾನಯೋಗೋ**ನಾಮ
**ಚತುರ್ಥೋಽಧ್ಯಾಯಃ**

ಹರಿಃ ಓಂ

# ಐದನೆಯ ಅಧ್ಯಾಯ

ಅರ್ಜುನ ಉವಾಚಃ—

ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂಚ ಶಂಸಸಿ
ಯಚ್ಛ್ರೇಯ ಏತಯೋರೇಕಂ ತನ್ಮೇಬ್ರೂಹಿ ಸುನಿಶ್ಚಿತಮ್ ೧

ಶ್ರೀ ಭಗವಾನುವಾಚಃ—

ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ
ತಯೋಸ್ತು ಕರ್ಮ ಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ೨

ಜ್ಞೇಯಸ್ಸ ನಿತ್ಯ ಸಂನ್ಯಾಸೀ ಯೋನದ್ವೇಷ್ಟಿ ನಕಾಂಕ್ಷತಿ
ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ ಪ್ರಮುಚ್ಯತೇ೩.

---

ಪದ ರಾಗ ಜಂಗಲ ಆದಿತಾಳ

ಹೇಳಿದೇನೋ ಕೃಷ್ಣನೆ ಇದ, ಹೇಳಿದೇನೋ ಕೃಷ್ಣನೆ ಪ.

ದೀನಪಾಲಾ ಗಾನಲೋಲಾ ಅ.

ಕರ್ಮ ಸನ್ಯಾಸವ ಹೊಗಳುವಿ ಪುನಹಾ
ಕರ್ಮವ ಮಾಡೆಂದು ಹೇಳುವ ಪರಿಯೂ ೧

ಉತ್ತಮ ಶ್ರೇಯಃ ಪ್ರದವಾವುದೋ ಪುರು
ಷೋತ್ತಮ ಇದರೊಳೊಂದಾವುದೊ ನಿಶ್ಚಯ ೨

ಆದರನೆ ಹೇಳಿಂದಿರೇಶ ವಿಠಲನೆ
ಮುದಡನಾದೆನಗೆ ನೀ ನೊಲಿದು ಕರುಣದಿ ೩ ೧

ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ
ಏಕ ಮಪ್ಯಾಸ್ಥಿತ ಸ್ಸಮ್ಯಗುಭಯೋರ್ವಿಂದತೇ ಫಲಮ್ ೪

ಯತ್ಸಾಂಖ್ಯೈಃ ಪ್ರಾಪ್ಯತೇಸ್ಥಾನಂ ತದ್ಯೋಗೈರಪಿಗಮ್ಯತೇ
ಏಕಂ ಸಾಂಖ್ಯಂಚ ಯೋಗಂಚ ಯಃಪಶ್ಯತಿ ಸಪಶ್ಯತಿ ೫

ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ
ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ೬

---

ಪದ ಅಟತಾಳ

ಕರ್ಮ ಸನ್ಯಾಸವು ಕರ್ಮ ಯೋಗವು ಕೇಳು
ಧರ್ಮವೆರಡು ಶ್ರೇಯಃ ಪ್ರದವೊ
ಕರ್ಮ ಸನ್ಯಾಸದಕಿಂತ ನಿತ್ಯದಲಿ ಸ
ತ್ಕರ್ಮ ಮಾಡುವುದೆ ಉತ್ತಮವೊ ೨

ಹಲವು ದ್ವಂದ್ವದಿ ದ್ವೇಷಿಸದ ಕಾಂಕ್ಷಿಸದ ನರ
ನಿಳೆಯೊಳು ನಿತ್ಯ ಸನ್ಯಾಸಿ
ತಿಳಿದ್ವಂದ್ವಗಳನೆಲ್ಲ ಸಹಿಪ ಸುಖದಿ ಬಂಧ
ಗಳನೆಲ್ಲ ನಲಿವ ನಿರ್ದೋಷಿ ೩

ಪರಮ ಸಾಂಖ್ಯವು ಕರ್ಮಯೋಗವು ಬೇರೆಂದು
ಬರಿದೆ ಬಾಲಕರಾಡುತಿಹರೋ
ಅರಿತ ಪಂಡಿತರಾಡಾರೈ ಒಂದಾದರು ಅನು
ಸರಿಸ್ಯುಭಯ ಫಲವ ನೈದುವನೋ ೪

ವರಸಾಂಖ್ಯನಾವಸ್ಥಾನವ ಪಡೆವನೊ ಅದು
ನಿರುತ ಕರ್ಮವ ಮಾಡಿದವನೂ
ತ್ವರದಿ ನೈದುವ ಸಾಂಖ್ಯ ಯೋಗೇಕವೆಂದಾವ
ನರಿವನಾತನೆ ಅರಿತವನೂ ೫

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ
ಸರ್ವ ಭೂತಾತ್ಮ ಭೂತಾತ್ಮ ಕುರ್ವನ್ನಪಿ ನಲಿಪ್ಯತೇ ೭

ನೈವಕಿಂಚಿತ್ಕರೋಮಿತಿ ಯುಕ್ತೋಮನ್ಯೇತಿ ತತ್ವವಿತ್
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್
[ ಶ್ವಸನ್ ೮

ಪ್ರಲಪನ್ ವಿಸ್ರುಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್

---

ಕರ್ಮಯೋಗದ ಹೊರತಾಗಿ ಪಾರ್ಥನೆ ಕೇಳು
ಕರ್ಮ ಸನ್ಯಾಸ ಮಾತ್ರದಲಿ
ಬ್ರಹ್ಮನೈದುವುದು ಕಷ್ಟಸಾಧ್ಯವದರಿಂದೀ
ಕರ್ಮಯೋಗ್ಯುಕ್ತ ಬೇಗದಲೀ

ಪರಬ್ರಹ್ಮನೈದುತಿಹನು ಯೋಗಯುಕ್ತನು
ಪರಮ ವಿಶುದ್ಧಾತ್ಮ ನರನು
ನಿರುತ ಜಿತಾತ್ಮ ಜಿತೇಂದ್ರಿಯನಾಗಿ ಈ
ವರ ಸುಕರ್ಮವ ನಾಚರಿಪನು

ಸರುವ ಭೂತಗಳಂತರ್ಯಾಮಿಯಾಗಿಹ ಸಿರಿ
ವರ ಇಂದಿರೇಶ ವಿಠ್ಠಲನೇ
ನೆರೆ ಎನ್ನ ಹೃದಯಾಂತರ್ಯಾಮಿಯೆಂದರಿವನ
ದುರಿತ ಕರ್ಮಗಳು ಲೇಪಿಸವೈ ೬-೭

ಅಷ್ಟಪದೀಗದ್ಯಾ:—

ನಾನು ಕಿಂಚಿತ್ಕರ್ಮ ಮಾಡಿದವನಲ್ಲೆನುತ
ಜ್ಞಾನಯುಕ್ತನು ತಿಳಿವನವನೆ ತತ್ವಜ್ಞನೋ
ಕಾಣುತಲಿ ಕೇಳುತಲಿ ಮುಟ್ಟುತಲಿ ಗಂಧವಾ
ಘ್ರಾಣ ಮಾಡುತ ನಿತ್ಯದೀ

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿಯಃ
ಲಿಪ್ಯತೇ ನ ಸಪಾಪೇನ ಪದ್ಮಪತ್ರ ಮಿವಾಂಭಸಾ ೧೦

ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮ ಶುದ್ಧಯೇ ೧೧

---

ಏನು ಭುಂಜಿಸಿದರೂ ನಡೆಯುತ್ತ ಮಲಗುತ್ತ
ತಾನು ಶ್ವಾಸವ ಬಿಡುತ ನುಡಿವುತಲಿ ಬಿಡುತಲೀ
ಏನು ಗ್ರಹಿಸಲು ಕಣ್ಣು ಮುಚ್ಚುತ್ತ ತೆರೆಯುತಲಿ
ನಾನಲ್ಲ ಕರ್ತನಿದಕೆ

ಇಂದಿರೇಶನೆ ಎನ್ನ ಇಂದ್ರಿಯಂಗಳನೆಲ್ಲ
ಇಂದ್ರಿಯಾರ್ಥಗಳೆಂಬ ವಿಷಯದೊಳಗನವರತ
ನಿಂದು ಪ್ರವರ್ತಿ ಮಾಡಿಸುವನೆಂಬುವ ಜ್ಞಾನ
ದಿಂದ ಕರ್ಮಗಳಿಲ್ಲವ

ಚಂದದಲಿ ಬ್ರಹ್ಮನೊಳಗಿಟ್ಟು ತತ್ಫಲ ಬಹಳ
ನಿಂದ್ಯವಾದ್ದೆಂದು ಸಂಗವನುಳಿದು ಕರ್ಮಗಳ
ಮುಂದೆ ಮಾಡುವನಾವನಾತ ಲೇಪಿಸ ಪಾಪ
ದಿಂದ ಕಮಲಾಂಬು ಪರಿಯೂ (೮-೯-೧೦)

ಷಟ್ಪದೀ ತ್ರಿಪುಟತಾಳ

ಕೋವಿದರು ತನುಮನದಿ ಬುದ್ಧಿಂ
ಕೇವಲಿಂದ್ರಿಯದಿಂದು ನಿರುತದಿ
ಭಾವಿಸುತ ಈ ತೆರದಿ ತತ್ಸಂಗವ ನುಡಿದು ಸತತ
ಭಾವಶುದ್ಧಿಯಗೋಸುಗದಿ ಮ
ತ್ತಾವ ಕರ್ಮವ ಮಾಡುತಿಪ್ಪರು
ಈ ವಿಧದ ಸದ್ಜ್ಞಾನ ಯುಕ್ತರು ಕರ್ಮಫಲ ಬಿಟ್ಟು ೧೧

ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್
ಅಯುಕ್ತಃ ಕಾಮಕಾರೇಣ ಫಲೇಸಕ್ತೋ ನಿಬಧ್ಯತೇ ೧೨

ಸರ್ವ ಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂವಶೀ
ನವದ್ವಾರೇ ಪುರೇ ದೇಹೀ ನೈವಕುರ್ವನ್ನಕಾರಯನ್ ೧೩

ನಕರ್ತೃತ್ವಂ ನಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ
ನಕರ್ಮಫಲ ಸಂಯೋಗಂ ಸ್ವಭಾವಸ್ತು ಪ್ರವರ್ತತೇ ೧೪

---

ಪರಮ ಶಾಂತಿಯ ಪಡೆಯುವರು ಹೀ
ಗರಿಯದವ ಕಾಮಿಸುತ ಕಾರ್ಯವ
ನಿರುತ ಮಾಡಲು ಫಲದಿ ಸಿಕ್ಕು ನಿಬದ್ಧನಾಗುವನೋ
ಅರಿತು ಕರ್ಮಗಳೆಲ್ಲ ಮನಸಾ
ಜರಿದು ಬಿಟ್ಟೊಂಬತ್ತು ಬಾಗಿಲ
ಪುರದಿ ಸುಖದಿಂವಿಹನು ದೇಹಿಯು ಮಾಡ ಮಾಡಿಸನು ೧೩

ನರನೆ ಕೇಳ್ ಜೀವರಿಗೆ ಲೋಕದಿ
ನೆರೆ ಸ್ವತಂತ್ರ ಕರ್ತೃತ್ವವಿಲ್ಲದ
ಪಿರಿದು ಹೇತುವಿನಿಂದ ಕಾರ್ಯವ ತಾನೆ ಗೈವುದಕುಂ
ಪರರ ಕಡೆಯಿಂ ಗೈಸುವುದಕುಂ
ಕರ್ಮಫಲವಂ ಪೊಂದುವುದಕುಂ
ನರಗವಗೆ ಸ್ವಾತಂತ್ರ್ಯ ದೊರೆಯದು ನಿಶ್ಚಯವಿದರಿಯೈ

ವಿವಿಧ ಜೀವರ ಯೋಗ್ಯತೆಯ ತಾ
ನವಧರಿಸಿ ಸರ್ವ ಸ್ವತಂತ್ರನು
ಭುವಿಯೊಳಿಹ ಪ್ರಾಣಿಗಳ ಕಡೆಯಿಂ ಸಕಲ ಕರ್ಮಗ
ಳವಲವಿಕೆಯಿಂ ಮಾಡಿಸುತ್ತವ
ರವರ ಕರ್ಮಕೆ ಯೋಗ್ಯ ಫಲಗಳ
ನವರಿಗಿತ್ತನುದಿನದಿ ಕಾಯ್ವನು ಸೂತ್ರಧಾರಕನು ೧೪

ನಾದತ್ತೇ ಕಸ್ಯಚಿತ್ಪಾಪಂ ನಚೈವ ಸುಕೃತಂ ವಿಭುಃ
ಅಜ್ಞಾನೇನಾವೃತಂ ಜ್ಞಾನಂ ತೇನಮುಹ್ಯಂತಿ ಜಂತವಃ ೧೫

ಜ್ಞಾನೇನತು ತದಜ್ಞಾನಂ ಯೇಷಾಂ ನಾಶಿತ ಮಾತ್ಮನಃ
ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ೧೬

ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ
ಗಚ್ಛಂತ್ಯ ಪುನರಾವೃತ್ತಿಂ ಜ್ಞಾನನಿರ್ಧೂತ ಕಲ್ಮಷಾಃ ೧೭

---

ಶ್ಲೋಕ:—

ಪರಮ ಸ್ವತಂತ್ರನು ಸಮಾಧಿಕ ರಹಿತ ಚಿತ್ಸುಖ ಪೂರ್ಣನೂ
ಧರಿಸ ನೀಶ್ವರನಾರ ಪಾಪವ ಧರಿಸ ಸುಕೃತವನಾರದಾ
ಪರಮ ತತ್ವಜ್ಞಾನವಜ್ಞಾನದಲಿ ಮುಸುಕಿದ ಕಾರಣ
ನಿರುತವದರಿಂ ಪ್ರಾಣಿಗಳು ಮೋಹಿತರಹರು ಎನ್ನರಿಯದೆ ೧೫

ಷಟ್ಪದೀ:—

ಜ್ಞಾನದಿಂದೀ ಮನದ ಕುತ್ಸಿತ
ಜ್ಞಾನವ್ಯಾರಿಗೆ ಕೆಡುತಿಹುದೊ ಆ
ಮಾನವರಿಗಾದಿತ್ಯನಂತಪರೋಕ್ಷ ಬೆಳಗುವುದು
ಆ ನರನು ಆ ಮೇಲೆ ಹೃದ್ಗತ
ಮೀನಕೇತನಪಿತನ ನಿರುತದಿ
ಕಾಣುತಲಿ ತದ್ಬುದ್ಧಿ ತನ್ಮನ ತತ್ಪರಾಯಣನು ೧೬

ನಿರುತ ತನ್ನಿಷ್ಠನು ಅಪುನರಾ
ವರತಿ ಪದವೈದುವನು ಕೇಳೀ
ಪರಿಯ ಜ್ಞಾನವನುಳ್ಳವನು ನಿರ್ಧೂತ ಕಲ್ಮಷನು
ನರನೆ ಕೇಳೀ ವಿಧದ ಜ್ಞಾನಿಗ
ಳಿರುವ ಪರಿಯನೆ ಪೇಳುವೆನು ಭೂ
ಸುರ ಸುವಿದ್ಯಾವಿನಯ ಸಂಪನ್ನನೊಳು ಗೋವಿನೊಳು

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ
ಶುನಿ ಚೈವ ಶ್ವಪಾಕೇ ಚ ಪಂಡಿತಾಸ್ಸಮದರ್ಶಿನಃ ೧೮

ಇಹೈವ ತೈರ್ಜಿತಸ್ಸರ್ಗೋ ಯೇಷಾಂ ಸಾಮ್ಯೇಸ್ಥಿತಂ ಮನಃ
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ೧೯

ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯನೋದ್ವಿಜೇತ್ ಪ್ರಾಪ್ಯಚಾಪ್ರಿ
[ಯಮ್
ಸ್ಥಿರಬುದ್ಧಿರಸಮ್ಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ೨೦

---

ಆನೆಯೊಳು ಶ್ವಪಚನೊಳು ಮೇ
ಣ್ಶ್ವಾನಕಾದಿ ಕ್ಷುದ್ರ ಪ್ರಾಣಿಗಳೊಳುಂ,
ಏನೊರೆವೆ, ಪಂಡಿತರು ಕೇಳ್ಸಮನನ್ನೆ ಕಾಣುವರ್ಪೈ
ಮಾನವಾಗ್ರಣಿ, ಯಾರಲೀವಿಧ
ಜ್ಞಾನವದು ಮನವೂರಿ ನಿಲ್ವುದೊ
ಜ್ಞಾನಿಯವನಾಕ್ಷಣದಿ ಭವಸಿಂಧುವನು ದಾಟುವನೈ ೧೭-೧೮

ಅಷ್ಟಪದೀಗದ್ಯಾ :—

ಪರಬ್ರಹ್ಮವೇತ್ತತಾಂ ಮುಕ್ತನಪ್ಪುದು ಸಾಧ್ಯ
ವರ ಸಮಜ್ಞಾನಿ ಮೋಕ್ಷವ ಹೇಗೆ ಪಡೆವನೆನೆ
ನಿರ್ದೋಷ ಬ್ರಹ್ಮನೇ ಸಮನೆನಿಪ ಕಾರಣದಿ
ಸಮಜ್ಞಾನಿಯೇ ಜಗದೊಳು
ಪರಮ ಬ್ರಹ್ಮಜ್ಞಾನಿಯಾದಕಾರಣದಿಂದ
ಧರೆಯಲಾಸಮದರ್ಶಿ ಶೀಘ್ರದೊಳು ಭವವಳಿದು
ನಿರತಿಶಯ ಮೋಕ್ಷ ಸಾಮ್ರಾಜ್ಯವನು ಪಡೆವನಿದ
ನರವರಾಗ್ರಣಿ ನಂಬೆಲೈ ೧೯

ಷಟ್ಪದೀ :—

ಬ್ರಹ್ಮನರಿತವ ತನ್ನ ಮನವನು
ಬ್ರಹ್ಮನಲಿ ನೆಲೆಗೊಳಿಸಿ ಸ್ಥಿರಮತಿ
ಹಮ್ಮನುಳಿದನುದಿನದಿ ಸಮ್ಯಙ್ಮೂಢ ನಲ್ಲದವ

ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ ಮಶ್ನುತೇ ೨೧

ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ೨೨

ಶಕ್ನೋತೀ ಹೈವ ಯಸ್ಸೋಢುಂ ಪ್ರಾಕ್ ಶರೀರ ವಿಮೋಕ್ಷಣಾತ್
ಕಾಮಕ್ರೋದೋದ್ಭವಂ ವೇಗಂ ಸಯುಕ್ತಸ್ಸ ಸ್ಸುಖೀನರಃ ೨೩

---

ದುರ್ಮತೆಯಿಂ ಪ್ರಾಪ್ಯ ಪ್ರಿಯ ಕವ
ಸನ್ಮತಿಸಿ ಹರುಷವನೆ ಐದನು
ದುರ್ಮನುಜ ರಂತಪ್ರಿಯಕೆ ದುಃಖಿಸನು ಕೇಳೆಂದ ೨೦

ಇನಿತು ಬಾಹ್ಯಸ್ಪರ್ಶದಿಂ ಬಹ
ಘನಪ್ರಿಯಾಪ್ರಿಯಗಳೊಳಸಕ್ತಾ
ಮನು ನಿರಂತರ ಆತ್ಮದರುಶನದಿಂದ ಯತ್ಸುಖವ
ಅನುಭವಿಸುವನೊ ಹಾಗೆ ಕರ್ಮಗ
ಳನು ಸದಾ ಬ್ರಹ್ಮನಲಿ ಭಾವಿಪ
ಘನಸುಯೋಗದಿ ಯುಕ್ತ ನರನಕ್ಷಯ ಸುಖವ ಪಡೆವ ೨೧

**ಸೀಸಮಾಲಿಕಾ:—**

ಪಂಚ ವಿಷಯಗಳ ಅನುಭವದಿ ಜನಿಸಿದ ಸುಖವು
ಮಿಂಚಿನಂದದಿ ತೋರಿ ಅಡಗುತಿಹುದು
ಆದ್ಯಂತಗಳನುಳ್ಳ ವಿಷಯ ಭೋಗಂಗಳಿವು
ಬಾಧಿಸುವುವಖಿಳ ದುಃಖಗಳನಿತ್ತು
ಇದನರಿತು ಬುಧಜನರು ಈ ವಿಷಯ ಭೋಗಗಳ
ನೊದೆದು ತ್ಯಜಿಸ್ಯವುಗಳಲಿ ಸ್ಪೃಹೆಯಸಿಡರು

ಯೋಽನ್ತಸ್ಸುಖೋಽನ್ತರಾರಾಮಸ್ತಥಾಽನ್ತರ್ಜ್ಯೋತಿರೇವ ಯಃ
ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ೨೪

ಲಭಂತೇ ಬ್ರಹ್ಮನಿರ್ವಾಣ ಮೃಷಯಃ ಕ್ಷೀಣ ಕಲ್ಮಷಾಃ
ಛಿನ್ನದ್ವೈಧಾ ಯತಾತ್ಮಾನ ಸ್ಸರ್ವಭೂತಹಿತೇ ರತಾಃ ೨೫

ಕಾಮಕ್ರೋಧ ವಿಯುಕ್ತಾನಾಂ ಯತೀನಾಂ ಯತಚೇತಸಾಂ
ಅಭಿತೋ ಬ್ರಹ್ಮ ನಿರ್ವಾಣಂ ವರ್ತತೇ ವಿದಿತಾತ್ಮನಾಂ ೨೬

---

ಆವ ಪುರುಷನು ದೇಹತ್ಯಾಗ ಮಾಳ್ಪುದಕೆ
ಮೊದಲೀವಿಧದ ಕಾಮಕ್ರೋಧಗಳಿಂದಲಿ
ಹುಟ್ಟುತಿಹ ಮನದ ಕ್ಷೋಭಾದಿ ವೇಗವನೆಲ್ಲ
ಅಟ್ಟಿ ಇಹದಲಿ ಸಹಿಸೆ ಶಕ್ತನಹನೋ
ಆತನೇ ಜ್ಞಾನಯುಕ್ತನು ಸುಖಿಪ ನರನು ಯಾ
ವಾತ ತನ್ನಂತರಾತ್ಮನ ಧ್ಯಾನದಿಂ
ದಂತರಂಗದಿ ಸುಖಿಪ ಅಂತರಾರಾಮನಾ
ಗ್ಯಂತರಂಗದಲಿ ಬ್ರಹ್ಮನನು ಕಂಡು
ನರನು ಪರಬ್ರಹ್ಮನ್ನನರಿತ ಯೋಗಿ
*ಸ್ಥಿರದಿ ನಿರ್ವಾಣ ಬ್ರಹ್ಮನನು ಪಡೆದು
ಪರಮ ಸುಖಭೋಗಿಸುತಲಿಹನಾತನು
ಮರಳಿ ಜನಿಸನು ಕೇಳು ಪಾರ್ಥ ನೀನಿದನು ೨೨-೨೫

ಪದ ಅಟತಾಳ

ಕ್ಷೀಣ ಕಲ್ಮಷರು ಸೆಂಛಿನ್ನ ಸಂಶಯವುಳ್ಳ
ಜ್ಞಾನದಿ ನಿಯತಾತ್ಮ ನರರೂ
ಪ್ರಾಣಿಗಳೆಲ್ಲರೊಳ್ಹಿತದಿ ವಿರತರು ಬ್ರಹ್ಮವ
ಪಡೆದು ಸುಖವ ಪೊಂದುವರು

---

*ಪ್ರಾಕೃತ ಶರೀರವಿಲ್ಲದ ಬ್ರಹ್ಮನನ್ನು

ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂ ಶ್ಚಕ್ಷುಶ್ಚೈವಾಂತರೇ ಭ್ರುವೋಃ ।
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭

ಯತೇಂದ್ರಿಯ ಮನೋಬುದ್ಧಿ ರ್ಮುನಿರ್ಮೋಕ್ಷ ಪರಾಯಣಃ
ವಿಗತೇಚ್ಛಾಭಯಕ್ರೋಧೋ ಯಸ್ಸದಾ ಮುಕ್ತ ಏವಸಃ ॥ ೨೮

---

ಕಾಮಕ್ರೋಧಾದಿಗಳಳಿದು ಚಲಿಪ ಚಿತ್ತ
ನೇಮಿಸುತಿಹ ಯತಿಗಳಿಗೆ
ಮಾಮನೋಹರನ ಬಲ್ಲವಗೆ ಮುಕ್ತಿಯು ಬಹು
ಸಾಮಿಪ್ಯವಾಗಿಹುದ್ಹಾಂಗೆ

ಅಪರೋಕ್ಷ ಜ್ಞಾನವ ಬಯಸುವ ಮನುಜನು
ಗುಪಿತ ಸ್ಥಾನದಲಿ ತಾ ಕುಳಿತು
ಶಪಥ ಪೂರ್ವಕ ಮಾತ್ರಾಸ್ಪರ್ಶಜಾ ಬಾಹ್ಯದ
ಕುಪಥದ ವಿಷಯವೆಂದರಿತು

ಹೊರಗಟ್ಟಿ ಇದನೆ ದೃಷ್ಟಿಯ ಹುಬ್ಬಿನಾ ಮಧ್ಯ
ಇರಿಸಿ ನಾಸಾಭ್ಯಂತರದಲಿ
ಚರಿಸುವ ಪ್ರಾಣ ಅಪಾನವ ಸರಿಮಾಡಿ
ನಿರುತವಭ್ಯಾಸ ಮಾಡುತಲೀ

ಹರಿಯ ಧ್ಯಾನದಿ ಮನಬುದ್ಧಿ ಇಂದ್ರಿಯಗಳ
ಸ್ಥಿರವಾಗಿ ನಿಯಮಿಸಿ ನಿರುತ
ಪರಿಪರಿ ವಿಷಯೇಚ್ಛಾ ಭಯಕ್ರೋಧವಳಿದು ಹೀ
ಗಿರುವನಾವನು ಕೇಳು ಆತ

ಮನನಶೀಲನು ಮೋಕ್ಷವಾಶ್ರೈಸಿದವನು ಇ
ವನೆ ಜೀವನ್ಮುಕ್ತನೆಂಬುವರೋ
ಅನುದಿನ ವಿಷಯಾನುಭವಿಸುತ್ತಲಿದ್ದರು
ಮುನಿಗಳು ಇದರೊಳು ಸಿಗರೋ

ಭೋಕ್ತಾರಂ ಯಜ್ಞತಪಸಾಂ ಸರ್ವಲೋಕ ಮಹೇಶ್ವರಮ್
ಸುಹೃದಂ ಸರ್ವಭೂತಾನಾಂ ಜ್ಞಾತ್ವಾಮಾಂ ಶಾಂತಿಮೃಚ್ಛತಿ ೨೯

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಕರ್ಮ ಸಂನ್ಯಾಸಯೋಗೋ**ನಾಮ
ಪಂಚಮೋಽಧ್ಯಾಯಃ

---

ಸರ್ವ ಪ್ರಾಣಿಗಳಿಗೂ ಸಖ ಯಜ್ಞತಪಗಳು
ಸರ್ವದಾ ಭೋಗಿಸುತಿಹನಾ
ಸರ್ವಲೋಕೇಶರಿಗೀಶನಾದೆನ್ನನು
ಸರ್ವದಾ ಕಂಡು ಶಾಂತಿಯನು

ಪಡೆವನೆನುತ ಇಂದಿರೇಶವಿಠಲರಾಯ
ನುಡಿದ ನೀ ಪರಿಯ ವಾಕ್ಯವನು
ಪೊಡವಿ ಪಾಲಕ ಧೃತರಾಷ್ಟ್ರನೆ ಕೇಳೆಂದು
ನುಡಿದ ನೀ ವಿಧದಿ ಸಂಜಯನು ೨೬-೨೯

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೆ **"ಗೀತಾರಂಜನಾ"**ಖ್ಯ ಗ್ರಂಥೆ
**ಕರ್ಮ ಸಂನ್ಯಾಸಯೋಗೋ**ನಾಮ
ಪಂಚಮೋಽಧ್ಯಾಯಃ



ಹರಿಃ ಓಂ

# ಆರನೆಯ ಅಧ್ಯಾಯ

ಶ್ರೀ ಭಗವಾನುವಾಚಃ—

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ ೧

ಯಂ ಸಂನ್ಯಾಸಮಿತಿಪ್ರಾಹುರ್ಯೋಗಂ ತಂವಿದ್ಧಿ ಪಾಂಡವ
ನಹ್ಯಸನ್ಯಸ್ತ ಸಂಕಲ್ಪೋ ಯೋಗೀಭವತಿ ಕಶ್ಚನ ೨

---

ಅರ್ಥ:—

ಕರ್ಮಫಲವನಾಶ್ರೈಸದೆ ನಿಯತದಿ
ಕರ್ಮ ಮಾಳ್ಪನ್ಯಾವನೊ ಅವನೂ
ಧರ್ಮನನುಜ ಕೇಳ್ವೈ ಸಂನ್ಯಾಸಿಯು
ಹಮ್ಮನಳಿದ ಯೋಗಿಯು ಅವನು

ಅಲ್ಲ ಯೋಗಿ ಸಂನ್ಯಾಸಿಯು ಕ್ರಿಯೆಗಳ
ನೆಲ್ಲ ಬಿಟ್ಟು ಅಗ್ನಿಯನಳಿವ
ಖುಲ್ಲ ಮಾನವನು ಕೆಡುತಿಹನೈ ಹೀ
ಗಲ್ಲ ಹೇಳುವೆನು ಅದರ ವಿಧಾ

ಹರಿಯು ಮಾಡಿಸುವುದರಿಯದೆ ಕರ್ಮವ
ನಿರುತ ನಾನೆ ಮಾಡುವೆನೆಂದು
ಮರುಳನಾಗದೆ ತತ್ಸಂಕಲ್ಪವ
ಜರಿದು ಅದರ ಫಲ ಬ್ಯಾಡೆಂದೂ

ಬಿಡುವಗೆ ಸಂನ್ಯಾಸಿಯು ಎಂದೆನುತಲಿ
ನುಡಿವರರಿಯೊ ಅರ್ಜುನ ಇದನೂ
ಬಿಡದಿಹ ಸಂಕಲ್ಪವ ಯೋಗಿಯು ಈ
ಪೊಡವಿಯೊಳಾಗನು ಕೇಳವನು ೧-೨

ಆರುರುಕ್ಷೋರ್ಮುನೇರ್ಯೋಗಂ ಕರ್ಮಕಾರಣ ಮುಚ್ಯತೇ
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣ ಮುಚ್ಯತೇ ೩

ಯದಾಹಿನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ
ಸರ್ವಸಂಕಲ್ಪ ಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ೪

ಉದ್ಧರೇದಾತ್ಮನಾತ್ಮಾನಂ ನಾತ್ಮಾನ ಮವಸಾದ ಯೇತ್
ಆತ್ಮೈವಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ೫

---

ಷಟ್ಪದಿ:—

ಧ್ಯಾನಯೋಗದ ವಿಧವ ಬಯಸುವ
ಮಾನವಗೆ ಅದನರಿಯೆ ಕರ್ಮವ
ಮಾಣದಲೆ ಮಾಡುವುದೆ ಕಾರಣವೆಂದು ಹೇಳುವರೊ
ಧ್ಯಾನಯೋಗಾ ರೂಢರಾಗಿಹ
ಜ್ಞಾನಿಗಳಿಗೆ ಶಮಾದಿಗಳೆತ
ಧ್ಯಾನಯೋಗಕೆ ಪರಮ ಸುಖಧಾನವಿದೆಂಬುವರೊ ೩

ಭೋಗಿಸುವ ವಿಷಯದೊಳು ಸಕ್ತನು
ಆಗದಲೆ ಬಹುವಿಧದ ಕರ್ಮದಿ
ನೀಗಿ ಆಸಕ್ತಿಯನು ನರನ್ಯಾವಾಗ ಹೀಗಿಹನೋ
ಆಗ ಸಂಕಲ್ಪಗಳನೆಲ್ಲವ
ನೀಗಿದವ ಸನ್ಯಾಸಿ ಧ್ಯಾನದ
ಯೋಗದಲಿ ಆರೂಢನೆಂದ್ಹೇಳ್ವರು ಧನಂಜಯನೆ ೪

ಇನಿತು ಯೋಗಾರೂಢನಾಗಲು
ಮನವ ನಿಗ್ರಹಿಸದಲೆ ಆಗದು
ತನ್ನ ತನ್ನಯ ಮನಸಿನಿಂದುದ್ಧರಿಸಿಕೊಳಬೇಕು
ಮನಸಿನಿಂ ತನ್ನನ್ನು ಬಳಲಿಸಿ
ಘನಸುದುಃಖವ ಪಡಿಸಲಾಗದು
ಮನವೆ ವೈರಿಯು ತನಗೆ ಮನವೇ ಬಂಧುವೆನಿಸುವುದು ೫

ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾಜಿತಃ
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ೬

ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ
ಶೀತೋಷ್ಣ ಸುಖದುಃಖೇಷು ತಥಾ ಮಾನಾಪಮಾನಯೋಃ ೭

ಜ್ಞಾನ ವಿಜ್ಞಾನ ತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮ ಕಾಂಚನಃ ೮

---

ಮನವನಾವನು ಗೆಲುವನೋ ಆ
ಮನುಜನಿಗೆ ಸ್ವಾಧೀನವಾಗೀ
ಮನವು ವಶವಾಗಿರುತಿಹುದು ಬಂಧುವಿನ ಪರಿಯಂತೆ
ಮನವ ಗೆಲ್ಲದ ಮನುಜನಿಗೆ ಈ
ಮನವು ವಶದಲಿ ಇರದೆ ಚಲಿಸುತ
ಅನುದಿನದಿ ಕೆಡಿಸುತಲಿಹುದು ಶತ್ರುವಿನ ಪರಿಯಂತೆ ೬

ಘನಸುಶೀತೋಷ್ಣಾದಿ ನಿರಂತರ
ಅನುಭವಿಪ ಸುಖದುಃಖದಲಿ ಅನು
ದಿನದಿ ಬಹ ಮಾನಾಪಮಾನದಿ ಚಲಿಸದಂದದಲಿ
ಮನವ ಗೆದ್ದು ಪ್ರಶಾಂತನಾಗಿಹ
ಮನುಜನಿಗೆ ಪರಮಾತ್ಮ ಧ್ಯಾನದಿ
ಮನವು ಸುಸ್ಥಿರವಾಗುವುದು ಕೇಳೆಂದನಸುರಾರಿ ೭

ಸೀಸಪದ್ಯ:—

ಹರಿಯನ್ನು ಶಾಸ್ತ್ರದಿಂದರಿವುದೇ ಜ್ಞಾನವು
ಹರಿಯ ಹೃದಯದಿ ಕಾಣ್ಬುದೆ ವಿಜ್ಞಾನವು
ಈ ವಿಧದ ಜ್ಞಾನ ವಿಜ್ಞಾನ ತೃಪ್ತಾತ್ಮನಾ
ಗೀನು ಬಯಸದ ಜಿತೇಂದ್ರಿಯನು ಜಿತನು

ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥ ದ್ವೇಷ್ಯ ಬಂಧುಷು
ಸಾಧುಷ್ವಪಿಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ೯
ಯೋಗೀಯುಂಜೀತ ಸತತ ಮಾತ್ಮಾನಂ ರಹಸಿಸ್ಥಿತಃ
ಏಕಾಕೀಯತ ಚಿತ್ತಾತ್ಮಾ ನಿರಾಶೀರಪರಿಗ್ರಹಃ ೧೦

---

ಶಿಲೆಯು ಕಾಂಚನ ಲೋಹ ಸಮನೆಂದು ತಿಳಿವನೋ
ಚಲಿಸ ಬಾಂದಲದಂತೆ ಸ್ಥಿರನಾಪನೋ
ಅಪರೋಕ್ಷ ಜ್ಞಾನಯುಕ್ತನು ಅವನೆ ಯೋಗಿಯು
ಸುಪವಿತ್ರನವನೆ ಮೂರ್ಲೋಕದೊಳಗೆ
ಸಖ ಸುಹೃದ ಅರ್ಯುದಾಶೀನ ಮಧ್ಯಸ್ಥರಲಿ
ಸಕಲ ಬಂಧುದ್ವೇಷಿ ಸಾಧುಗಳೊಳು
ಪಾತಕಿಗಳೊಳಗೆ ಸಮಬುದ್ಧಿಯುಳ್ಳವನಾಗಿ
ಈ ತೆರದಿ ಸಂಚರಿಸುತಿಹ ಶ್ರೇಷ್ಠನೋ

ಸಕಲರಲ್ಲೂ ಸಮನ ಕಾಣ್ಬ *ಕತದಿ
ಸುಖಪೂರ್ಣ ವಿಷಯಗಳ ತೊರೆದ ಕತದಿ
ಸಖನ ಶತ್ರುವ ಸಮದಿ ನೋಳ್ಪ ಕತದಿ
ದುಃಖ ಸಂಬಂಧವಿಲ್ಲದೆ ಮೆರೆವನವನು ೮-೯

## ಸು ಳಾ ದಿ

ಅ ಟ ತಾ ಳ

ಈ ಪರಿ ಅಪರೋಕ್ಷಾ ಜ್ಞಾನಾ ಪಡೆಯಬೇಕೆಂಬಾ ಪುರುಷಾನು
ಆಸೆಯಳಿದು ಕುತ್ಸಿತರಲ್ಲಿ ತಾ ಪರಿಗ್ರಹವ ಮಾಡದಲೆ
ಮರ್ವಿಷಯಾದಿ ಭೋಪರಿ ಮನವ ತೊಳಲದಂತೆ ನಿಯಮಿಸಿ
ಶ್ರೀಪತಿ ಧ್ಯಾನಗೋಸುಗ ಒಬ್ಬನೇಕಾಂತದಿಂ
ಪರಿಶುದ್ಧ ಸ್ಥಾನದೊಳಿದ್ದು ಮನವಾನು ಸ್ಥಾಪಿಸಬೇಕು
ಇಂದಿರೇಪತಿ ವಿಠಲನ ಆ ಪಾದ ಪದುಮ ಧ್ಯಾನಾದಲಿ ನಿರಂತರ ೧೦

*ಕತದಿ = ಕಾರಣದಿಂದ

ಶುಚೌದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ
ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನ ಕುಶೋತ್ತರಮ್ ೧೧

ತತ್ರೈಕಾಗ್ರಂ ಮನಃಕೃತ್ವಾ ಯತಚಿತ್ತೇಂದ್ರಿಯಕ್ರಿಯಃ
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮ ವಿಶುದ್ಧಯೇ ೧೨

ಸಮಂ ಕಾಯ ಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂದಿಶಶ್ಚಾನವಲೋಕಯನ್ ೧೩

---

ಆದಿತಾಳ

ಅತಿ ಶುಚಿ ದೇಶದಿ ಚೈಲಾಜಿನ ಕುಶ ಅತಿ ನೀಚವು ಅತಿ ಉನ್ನತವಲ್ಲ
ದುತವಾದಾಸನ ಒಂದರಮೇಲೊಂದ ಅತಿ ಸ್ಥಿರವಾಗಿಹುದನೆ ಸಂಸ್ಥಾಪಿಸಿ
ಸ್ಥಿತನಾಗ್ಯದರಲಿ ಚಲಿಸದೆ ಮುದದಿಂ *ಯತ ಚಿತ್ತೇಂದ್ರಿಯ ಕ್ರಿಯವುಳ್ಳವನಾ
ಗುತ ಮನವನು
ಏಕಾಗ್ರವ ಮಾಡಿ ಕ್ಷಿತಿಯೊಳು ಯೋಗಿಯು ಯೋಗಾಭ್ಯಾಸವ
ಸತತವು ಆತ್ಮವಿಶುದ್ಧಿಗೋಸುಗ ಮಾಡುತ ಸಮಕಾಯ
ಶಿರೋಗ್ರೀವವ ಧರಿಸುವ ಚಂಚಲನಾಗದೆ ಸ್ಥಿರ
ಮತಿಯಾಗುತ ದಿಶೆಗಳ ನವಲೋಕಿಸದಲೆ ನೋಡುತ ತನ್ನಯ
ಮೂಗಿನ ಕೊನೆಯನಿ
ಗರ್ತಭಯವುಳ್ಳ ಪ್ರಶಾಂತಾತ್ಮನು ಹೀಗತಿಶಯ ಬ್ರಹ್ಮ
ಚಾರಿಯ ವ್ರತದಲಿ ಸಂ
ಸ್ಥಿತನಾಗುತ ಮನವನು ನಿಯಮಿಸಿ ಹೃ
ದ್ಗತ ಇಂದಿರೇಪತಿ ವಿಠಲ ಎನ್ನೊಳ್ ರತಚಿತ್ತನು
ಮತ್ಪರನಾಗುವನೋ (೧೧-೧೨-೧೩)

*ಯತ = ನಿಯಮಿತ, ಸ್ವಾಧೀನವಾದ

ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿ ವ್ರತೇಸ್ಥಿತಃ
ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ೧೪

ಯುಞ್ಜನ್ನೇವಂ ಸದಾತ್ಮಾನಂ ಯೋಗೀ ನಿಯತ ಮಾನಸಃ
ಶಾಂತಿಂ ನಿರ್ವಾಣ ಪರಮಾಂ ಮತ್ಸಂಸ್ಥಾಮಧಿಗಚ್ಛತಿ ೧೫

ನಾತ್ಯಶ್ನತಸ್ತು ಯೋಗೋಽಸ್ತಿ ನಚೈಕಾಂತ ಮನಶ್ನತಃ
ನ ಚಾತಿ ಸ್ವಪ್ನ ಶೀಲಸ್ಯ ಜಾಗ್ರತೋನೈವಚಾರ್ಜುನ ೧೬

ಯುಕ್ತಾಹಾರ ವಿಹಾರಸ್ಯ ಯುಕ್ತ ಚೇಷ್ಟಸ್ಯ ಕರ್ಮಸು
ಯುಕ್ತ ಸ್ವಪ್ನಾವ ಬೋಧಸ್ಯ ಯೋಗೋಭವತಿ ದುಃಖಹಾ ೧೭

---

ತ್ರಿ ಪು ಟ ತಾ ಳ

ಈಪರಿ ಮನವಾನು ಎನ್ನ ಧ್ಯಾನದಿ ಸದಾ
ಸ್ಥಾಪಿಸಿದಾ ನಿಯತಾ ಮಾನಸಾನು
ತಾಪತ್ರಯಾನಬಿಟ್ಟು ಬ್ರಹ್ಮನಿರ್ವಾಣವೆಂ
ಬಾ ಪರಮ ಸ್ಥಾನ ಮತ್ಸಂಸ್ಥಾದಾ
ತಾ ಪಡೆವನು ಯೋಗೀ, ಇಂಥ ಯೋಗವ ಮಾಡ
ಲಾಪನಲ್ಲವೊ ಬಹು ಭುಂಜಿಸನು
ಪ್ರಾಪುತವಲ್ಲವೊ ಭುಂಜಿಸದಿರುತಿರೆ
ಈ ಪವಿತ್ರಾವಾದ ಯೋಗಾಭ್ಯಾಸಾ
ತಾ ಪಡೆಯನು ಅತಿ ಸ್ವಪ್ನಾಶೀಲನು ಮತ್ತು
ಸ್ವಪ್ನವಿಲ್ಲದ ಅತಿಜಾಗ್ರತನು
ಈಪರಿ ಯೋಗಾವನ್ನೈದಾನು ಕೇಳೆಂದಿ
ರಾಪತಿ ವಿಠಲನ ಕ್ಲುಪ್ತವೊ ಪಾರ್ಥ (೧೪-೧೫-೧೬)

ಅ ಟ ತಾ ಳ

ಯೋಗೋಪಯುಕ್ತ ಆಹಾರ ವಿಹಾರವು
ಯೋಗೋಪಯುಕ್ತ ಕರ್ಮಗಳಲ್ಲಿ ಚೇಷ್ಟೆಯು

ಯದಾ ವಿನಿಯತಂ ಚಿತ್ತಮಾತ್ಮನ್ಯೇವಾತಿತಿಷ್ಠತೇ
ನಿಸ್ಪೃಹಸ್ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ೧೮

---

ಯೋಗೋಪಯುಕ್ತ ಸ್ವಪ್ನಾವ ಬೋಧನವುಳ್ಳವಗೆ
ದುಃಖನಾಶನಗೈಸುವ ಈ ವಿಧ

ಯೋಗಸಾಧ್ಯವು ಆಗುವುದು ಕೇಳು ಪಾರ್ಥನೆ, ಯಾ
ವಾಗ ನೇಮಿಸಿದ ಚಿತ್ತವು ಆತ್ಮನಲ್ಲೆ ಚೆ
ನ್ನಾಗಿ ನಿಲ್ಲುವುಮೊ ನಿಸ್ಪೃಹ ಸರ್ವಕಾಮದಿ
ಆಗುವನಾಗ ಆ ಪುರುಷ ಯೋಗಯುಕ್ತನಾ
ಗಿಹನೆಂದೆನಿಸುವ ಜ್ಞಾನಿ ಜನರಿಂದ
ಹೀಗೆ ನೇಮಿಸಿದ ಚಿತ್ತವು ಆತ್ಮಧ್ಯಾನದಿ
ಯೋಗ ಮಾಡುತಲು ಘಾಳಿಯು ಇಲ್ಲದಿಹ ಸ್ಥಳ
ದಾಗ ಹಚ್ಚಿದ ದೀಪದಂತೆ ಚಲಿಸಾದೆ
ಹ್ಯಾಂಗೆ ನಿಂತಿರುವುದೊ ಅದೆ ಉಪಮಾವೆಂಪೆನಿಸವು
ಹಾಂಗೆ ಧ್ಯಾನದಿ ಮನ ಚಲಿಸದೆ ನಿಂದು ಯಾ
ವಾಗ ತಧ್ಯಾನದಲ್ಲಿಯೆ ಉಪರಮಿಸುತ್ತೋ
ಆಗವ ನಿಂದಾತ್ಮ ಕಾಣಪಡುವ ಕಂಡೂ
ಆಗುವ ಮನದ ಬಹಳ ತುಷ್ಟನದಕಿನ್ನು
ಆಗದು ಸರಿ ಮತ್ತೊಂದ್ದುರುಷಾಗಳತ್ಯಂತ
ವಾಗಾದಿ ಸರ್ವೇಂದ್ರಿಯಗಳಿಂದ ಸುಖವೊಮ್ಮ
ಭೋಗ ಮಾಳ್ಪದಕು ಮಿಾರಿದ ಅತೀಂದ್ರಿಯ ಸುಖ
ವಾಗೂವುದವನ ಬುದ್ಧಿಂ ಗ್ರಾಹ್ಯವಲ್ಲವದು ಬಲ್ಲ
ಯೋಗಿಯು ಈ ವಿಧ ಸುಖಭೋಗದಲಿ ಸ್ಥಿತ
ನಾಗಿ ಕುತ್ಸಿತ ಸುಖದಲಿ ಮನಚಂಚಲ
ವಾಗಲೀಸನು ನಿಶ್ಚಯವು ಕೇಳೊ ಪಾರ್ಥನೆ

ಯಥಾದೀಪೋ ನಿವಾತಸ್ಥೋ ನೇಂಗತೇ ಸೋಪಮಾಸ್ಮೃತಾ
ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ೧೯

ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ
ಯತ್ರ ಚೈವಾತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ೨೦

ಸುಖಮಾತ್ಯಂತಿಕಂ ಯತ್ತದ್ಬುದ್ಧಿ ಗ್ರಾಹ್ಯಮತೀಂದ್ರಿಯಮ್
ವೇತ್ತಿ, ಯತ್ರ ನಚೈವಾಽಯಂ ಸ್ಥಿತಶ್ಚಲತಿ ತತ್ವತಃ ೨೧

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ
ಯಸ್ಮಿನ್ ಸ್ಥಿತೋ ನದುಃಖೇನ ಗುರುಣಾಪಿ ವಿಚಾಲ್ಯತೇ ೨೨

---

ವಾಗೀಶಪಿತ ಇಂದಿರೇಶಾ ವಿಠಲರಾಯಾ
ನೀಗುಣತ್ರಯ ಬಂಧ ಬಿಡಿಸುವನವನಿಗೆ (೧೭ ೧೮-೧೯)

ರೂ ಪ ಕ ತಾ ಳ

ಈ ನಿತ್ಯ ಪರಮಾತ್ಮ ದರುಶನದಿಂ ಜನ್ಯ ಸುಖಾ
ವನುಭವಿಸಾದನು ಲಭಿಸೀ ಇದಕಿಂತಾ ಮತ್ತೊಂದು
ಘನಸುಖದಾ ಲಾಭಾವಿಲ್ಲೆಂದು ಅರಿಯುವನೋ ಅರ್ಜು
ನನ ಈ ವಿಧ ಸುಖದಿ ಸ್ಥಿತನಾದಾ ಕಾಲದಲ್ಲಿ
ತನು ಭೇದಾಭೇದಾದಿ ಘನದುಃಖ ಬಡಿಸಾಲಾ
ತನು ಚಲಿಸಾನದಕತ್ಯಾನಂದದೊಳಿರುವಾ
ಮುನಿ ಜನಪಾಲಕ ಇಂದಿರೇಪತಿ ವಿಠಲರಾಯನ ಧ್ಯಾ
ನನವರತದಿ ಮಾಡಲು ಭವಭಯಹರ
ಸುಖ ಲಭಿಸುವುದೈಯ (೨೦-೨೧-೨೨)

ತಂ ವಿದ್ಯಾದ್ದುಃಖ ಸಂಯೋಗ ವಿಯೋಗಂ ಯೋಗ ಸಂಜ್ಞಿತಮ್
ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣ ಚೇತಸಾ ೨೩
ಸಂಕಲ್ಪಪ್ರಭವಾನ್ ಕಾಮಾಂ ಸ್ತ್ಯಕ್ತ್ವಾ ಸರ್ವಾನಶೇಷತಃ
ಮನಸೈವೇಂದ್ರಿಯ ಗ್ರಾಮಂ ವಿನಿಯಮ್ಯ ಸಮಂ ತತಃ ೨೪

---

ಚತುಷ್ಪದೀಗದ್ಯಾ:—

*ದುಃಖ ಕಾರಣಗಳ್ಗಲವುಂಟಾದ ಕಾಲಕ್ಕು
ದುಃಖಯುಕ್ತನು ಆಗದಿರುವುದೇ ಯೋಗ - ವಿ
ರಕ್ತ ಮಾನವನಿಂದವಶ್ಯ ಸಾಧಿಸಲರ್ಹ ವಾ
ದುದೀಯೋಗ ತಿಳಿಯೈ ೨೩

ಷಟ್ಪದೀ:—

ಪರನು ಹೀಗೇ ಮಾಳ್ಪನೆಂಬುವ
ಮರುಳು ಸಂಕಲ್ಪದಲಿ ಹುಟ್ಟುವ
ಸರುವ ಬಯಕೆಗಳೆಲ್ಲ ಶೇಷವು ಉಳಿಯದಂದದಲಿ
ಜರಿದು ಬಿಟ್ಟೋ ಮನಸಿನಿಂದಲಿ
ಕರಣಗಳ ಗ್ರಾಮವ ಸಮಂತಾ
ದ್ಭರದಿ ನಿಯಮಿಸಿ ಮೆಲ್ಲಮೆಲ್ಲನೆ ಧೃತಿಗೃಹಿತವಾದ ೨೪

---

ಅಷ್ಟಪದೀಗದ್ಯಾ:—

*ದುಃಖಕಾರಣಗಳ್ಗಲವುಂಟಾದ ಕಾಲಕ್ಕೆ
ದುಃಖವುಂಟಾಗುವಂತಾಚರಿಸದಿರುವುದೇ
ಯುಕ್ತ ಮತಿವಂತರಿಂ ಯೋಗವೆನ್ನಲ್ಪಡುವು
ದಿದನು ಯತ್ನಗಳಿಂದಲಿ
ರಕ್ತನಲ್ಲದ ಮನುಜ ಸಾಧಿಸಲ್ಕರ್ಹವಾ
ಸಕ್ತಿಯಿಂ ಯೋಗಯುಕ್ತಾತ್ಮನಿದ ಪಡೆದು ಬಹು
ದುಃಖ ಸಂಬಂಧದಿಂ ದೂರನಾಗಿರುತಿಹುದೆ
ಶ್ರೇಷ್ಠವಹುದಿದ ಕೇಳೆಲೈ

(ಪಾಠಾಂತರ)

ಶನೈಶ್ಶನೈರುಪರಮೇದ್ಬುದ್ಧ್ಯಾ ಧೃತಿ ಗೃಹೀತಯಾ
ಆತ್ಮಸಂಸ್ಥಂ ಮನಃಕೃತ್ವಾ ನಕಿಂಚಿದಪಿ ಚಿಂತಯೇತ್ ೨೫

ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ೨೬

ಪ್ರಶಾಂತ ಮನಸಂಹ್ಯೇನಂ ಯೋಗಿನಂ ಸುಖಮುತ್ತಮಮ್
ಉಪೈತಿ ಶಾಂತರಜಸಂ ಬ್ರಹ್ಮಭೂತ ಮಕಲ್ಮಷಮ್ ೨೭

---

ಬುದ್ಧಿಯಿಂದಲಿ ಮನವ ನಿಲ್ಲಿಸಿ
ಶ್ರದ್ಧೆಯಿಂ ಪರಮಾತ್ಮ ಧ್ಯಾನದಿ
ಹೊದ್ದಿಯಿರುವಂದದಲಿ ಮನವನು ಮಾಡಿ ಕಿಂಚಿದಪಿ
ಬದ್ಧನಾಗುವ ವಿಷಯ ಚಿಂತೆಯ
ನೊದ್ದು (ನೊಂದು) ಮಾಡದೆ ಧ್ಯಾನಯೋಗವೆ
ಶುದ್ಧ ಸುಖಪ್ರದವೆಂದು ಧ್ಯಾನನ ಮಾಡುತಿರಬೇಕು ೨೫

ಸ್ಥಿರದಿ ನಿಲ್ಲದ ಚಂಚಲದ ಮನ
ವೆರಗುತಿರೆ ಆವಾವ ವಿಷಯದಿ
ಚರಿಸಿ ಚಲಿಸಿದ ಪಕ್ಷದಲಿ ತತ್ತದ್ವಿಷಯದಿಂದ
ಪರಮ ಯತ್ನದೊಳಿದನೆ ನಿಯಮಿಸಿ
ಹರಿಯ ಪಾದದ್ವಂದ್ವ ಧ್ಯಾನದಿ
ಸ್ಥಿರದಿ ನಿಲುವಂದದಲಿ ವಶದಲ್ಲಿಡುತಲಿರಬೇಕು ೨೬

ಘನ ಪ್ರಶಾಂತ ಮನಸ್ಕ ವಿಗತಂ
ಜನನು ಶಾಂತ ರಜಸ್ಕ ಬ್ರಹ್ಮನ
ಅನವರತ ಧ್ಯಾನಿಸುವ ಈ ವರ ಯೋಗಿಯನು ಬಳಿಕ
ಅನುಪಮದ ಸುಖ ಸೇರುವುದು ಹೀ
ಗನುದಿನದಿ ಪರಮಾತ್ಮ ಧ್ಯಾನದಿ
ಮನವನಿಡುತಿರೆ ವಿಗತ ಕಲ್ಮಷನಾಗಿ ಸುಖದಿಂದ ೨೭

ಯಂ ಜನ್ನೇವ ಸದಾಽಽತ್ಮಾನಂ ಯೋಗೀ ವಿಗತ ಕಲ್ಮಷಃ
ಸುಖೇನ ಬ್ರಹ್ಮಸಂಸ್ಪರ್ಶ ಮತ್ಯಂತಂ ಸುಖಮಶ್ನುತೇ ೨೮

ಸರ್ವಭೂತಸ್ಥ ಮಾತ್ಮಾನಂ ಸರ್ವಭೂತಾನಿಚಾತ್ಮನಿ
ಈಕ್ಷತೇ ಯೋಗ ಯುಕ್ತಾತ್ಮಾ ಸರ್ವತ್ರ ಸಮದರ್ಶನಃ ೨೯

ಯೋಮಾಂ ಪಶ್ಯತಿ ಸರ್ವತ್ರ ಸರ್ವಂಚ ಮಯಿ ಪಶ್ಯತಿ
ತಸ್ಯಾಹಂ ನಪ್ರಣಶ್ಯಾಮಿ ಸಚಮೇನ ಪ್ರಣಶ್ಯತಿ ೩೦

---

ಹರಿಯ ಸಂಸ್ಪರ್ಶಜದ ಬಹು ಸುಖ
ನಿರುತ ಯೋಗಿಯು ಭೋಗಿಸುತಲಿಹ
ಅರಿವ ಸರ್ವ ಪ್ರಾಣಿಗಳು ಹರಿಯೊಳಗೆ ಇಹರೆಂದು
ಹರಿಯು ಸರ್ವ ಪ್ರಾಣಿಗಳ ಒಳ
ಹೊರಗೆ ಇಹನೆಂದೆನುತ ಕಾಣುವ
ನರನು ಯೋಗದಿ ಯುಕ್ತ ಸರ್ವತ್ರದಲಿ *ಸಮದರ್ಶಿ (೨೮-೨೯)

ಅಷ್ಟಪದೀಗದ್ಯ:—

ಎನ್ನ ಸರ್ವತ್ರದಲಿ ಇಹನೆಂದು ತಿಳಿದು ಕೇ
ಳಿನ್ನು ಎನ್ನಲಿ ಸರ್ವವಿಹುದೆಂದು ಯಾವಾತ
ನೆನ್ನ ಈ ತೆರದಿ ಕಾಣುವನೊ ಜಗದೊಳು ಆತ
ನನ್ನು ನಾ ಕೆಡಿಸೆನವನು

ಎನ್ನ ತಾನೇ ಬ್ರಹ್ಮ ನಿರ್ಗುಣ ನಿರಾಕಾರ
ನೆನ್ನುತಲಿ ಕೆಡಿಸನ್ಯಾವಾತ ಸರ್ವರೊಳಿದ್ದ
ಎನ್ನ ರೂಪಕೆ ಭೇದವಿಲ್ಲ ಒಬ್ಬನೆ ವ್ಯಾಪ್ತ
ನೆನ್ನುತಲಿ ಭಜಿಸುತಿಹನೋ ೩೦

---

*ಸರ್ವತ್ರದಲ್ಲೂ ಸಿದ್ಧೋಷನಾದ ಪರಮಾತ್ಮನನ್ನು ನೋಡುವವನು.

ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿವರ್ತತೇ ೩೧

ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ
ಸುಖಂವಾ ಯದಿ ವಾ ದುಃಖಂ ಸಯೋಗೀ ಪರಮೋಮತಃ ೩೨

ಅರ್ಜುನ ಉವಾಚ:—

ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ
ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ೩೩

ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ೩೪

---

ನರನೆ ಕೇಳಾಯೋಗಿ ಸರ್ವ ಸಂಸಾರ ವನು
ಸರಿಸುತಿದ್ದರು ಅದರ ಸ್ವಾತಂತ್ರ್ಯವೆನ್ನಲ್ಲಿ
ನಿರುತ ಭಾವಿಸುತ ವರ್ತಿಪನು ಜೀವನ್ಮುಕ್ತ
ಧರೆಯೊಳಗೆ ಧನ್ಯನವನು

ನರನಾವ ಸುಖದುಃಖ ಸರ್ವತ್ರ ಸಮವೆಂದು
ಅರಿತು ತನ್ನಂತೆ ಭಾವಿಸುವ ಯೋಗಿಯು ಜಗದಿ
ಪರಮ ಉತ್ತಮನು ಸಮ್ಮತನು ಕೇಳಾತನೆ
ನರಲೋಕದೊಳು ಪೂಜ್ಯನೋ ೩೧-೩೨

ಅರ್ಜುನ ಉವಾಚ:—

ಎಲೆ ಕೃಷ್ಣ ನಿನ್ನಿಂದ ಪ್ರೋಕ್ತವಾದಿನಿತು ನಿ
ರ್ಮಲ ಯೋಗದಲಿ ಸಾಮ್ಯದಿಂದಿರುವ ಪರಿಯಿಲ್ಲ
ತಿಳಿದೆನಾದಡೆ ಇದಕೆ ಮನ ಚಪಲವಾದದಿಂ
ನಿಲುವ ಪರಿಸ್ಥಿರದಿಂದಲೀ

ಶ್ರೀ ಭಗವಾನುವಾಚ:—

ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೆ ೩೫

ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ
ವಶ್ಯಾತ್ಮನಾತು ಯತತಾ ಶಕ್ಯೋಽವಾಪ್ತು ಮುಪಾಯತಃ ೩೬

---

ಜಲಜಾಕ್ಷನಾ ಕಾಣೆ ಚಂಚಲದ ದೃಢತರದ
ಬಲದಿ ಪ್ರಮಥಿಸುವ ಮನ ನಿಗ್ರಹವು ದುಷ್ಕರವೊ
ಇಳೆಯೊಳಗೆ ಘಾಳಿ ಮೂಟೆಯು ಕಟ್ಟುವಂತೆ ನಾ
ತಿಳಿವೆನಿದನೆಂದ ಪಾರ್ಥ ೩೩-೩೪

ಷಟ್ಪದೀ ತ್ರಿಪುಟತಾಳ

ಶ್ರೀ ಭಗವಾನುವಾಚ:—

ಮನವು ದುರ್ನಿಗ್ರಹವು ಚಂಚಲ
ವನುದಿನದಿ ಚಲಿಸುವುದು ಅಹುದಹು
ದಿನಿತು ಸಂಶಯವಿಲ್ಲವಾದರು ಪಾಂಡುನಂದನನೆ
ಅನುದಿನದಿ ವೈರಾಗ್ಯವೆಂಬೀ
ಘನ ಉಪಾಯದಿ ಮೆಲ್ಲಮೆಲ್ಲನೆ
ಮನವನಭ್ಯಾಸದಲಿ ನಿಗ್ರಹ ಮಾಡಬಹುದೆಂದ ೩೫

ಮನವ ನಿಯಮಿಸದಿದ್ದ ಪುರುಷಗೆ
ಘನಸುಯೋಗವು ಪ್ರಾಪ್ತವಾಗದು
ಎನುತ ಎನಗದು ಸಮ್ಮತವೊ ಹೇ ಪಾಂಡುನಂದನನೆ
ಮನವ ವಶದೊಳಗಿರಿಸಿ ಯೋಗಕೆ
ಅನುದಿನದಿ ಯತ್ನವನೆ ಮಾಡುವ
ಮನುಜನಿಗೆ ಅದನೈದೆ ಶಕ್ಯವೊ ಈ ಉಪಾಯಗಳಿಂ ೩೬

ಅರ್ಜುನ ಉವಾಚ:—

ಅಯತಿ ಶ್ರದ್ಧಯೋಪೇತೋ ಯೋಗಾಚ್ಚಲಿತ ಮಾನಸಃ
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ೩೭

ಕಚ್ಚಿನ್ನೋಭಯ ವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ
ಅಪ್ರತಿಷ್ಠೋ ಮಹಾಬಾಹೋ ವಿಮೂಢೋಃ ಬ್ರಹ್ಮಣಃ ಪಥಿ ೩೮

ಏತನ್ಮೇ ಸಂಶಯಂ ಕೃಷ್ಣ ಛೇತ್ತು ಮರ್ಹಸ್ಯಶೇಷತಃ
ತ್ವದನ್ಯಸ್ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ೩೯

---

ಪದ ಅಟತಾಳ

ಹೇಳು ಕೃಷ್ಣನೆ ಎನ್ನ ಮನದಾ, ಸಂಶಯವನ್ನು
ಕೀಳು, ಕೃಪಾಂಬುಧೆ ಕೇಳುವೆನೋ ಪ.

ಕರ್ಮಪಥದಿ ಜ್ಞಾನಯೋಗದಿದೂಭಯ
ಧರ್ಮದಿಂದಲಿ ಭ್ರಷ್ಟನಾದವನು ಕೇಳ್
ಬ್ರಹ್ಮಪಥದಿ ಮೂಢ ಅಪ್ರತಿಷ್ಠಿತನಾಗಿ
ದುರ್ಮತಿ ಛಿನ್ನಾಭ್ರವತು ಕೆಟ್ಹೋಗುವನೋ ೧

ಮನವ ನಿಗ್ರಹಿಸದೆ ಅನುದಿನ ಯೋಗಾವ
ಅನುಸರಿಸುವ ಭಕ್ತ್ಯುಪೇತನು ಕೇಳ್
ಘನಸುಯೋಗದ ಸಿದ್ಧಿ ಅಪ್ರಾಪ್ಯವಾಗಿರೆ
ಮನ ಚಲಿಸಲು ಪಡೆವಾಗತಿ ಯಾವುದೊ ೨

ಈ ಸಂಶಯವಶೇಷ ನಿಲ್ಲದಂದದಿ ಎಲ್ಲಾ
ನಾಶ ಮಾಡಲು ಅರ್ಹ ನೀನೆ ಇಂದಿ
ರೇಶ ವಿಠಲ ನಿನ್ನ ಹೊರತಾಗಿ ಸಂಶಯ
ನಾಶ ಮಾಡುವರಿಲ್ಲ ಲೋಕದಿ ೩

(೩೭-೩೯)

ಶ್ರೀ ಭಗವಾನುವಾಚ:—

ಪಾರ್ಥನೈವೇಹನಾಮುತ್ರ ವಿನಾಶಸ್ತಸ್ಯ ವಿದ್ಯತೇ
ನಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತಗಚ್ಛತಿ ೪೦

ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಸ್ಸಮಾಃ
ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ೪೧

ಅಥವಾ ಯೋಗಿನಾಮೇವ ಕುಲೇಭವತಿ ಧೀಮತಾಮ್
ಏತದ್ಧಿ ದುರ್ಲಭತರಂ ಲೋಕೇ ಜನ್ಮಯದೀದೃಶಮ್ ೪೨

ತತ್ರ ತಂ ಬುದ್ಧಿ ಸಂಯೋಗಂ ಲಭತೇ ಪೌರ್ವ ದೇಹಿಕಮ್
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ೪೩

---

ಸೀಸಮಾಲಿಕಾ:—

ತಂದೆ ಕೇಳೀಯೋಗವನುಸರಿಸಿ ಚಲಿಸಿದವ
ಗೆಂದು ಇಹಪರದಿ ಕೇಡಿಲ್ಲ ಮತ್ತು
ಮುಂದೆ ಈ ಮಂಗಳವನಾಚರಿಪನಾವನೂ
ಎಂದೆಂದು ದುರ್ಗತಿಯನೈದ ಕೇಳೋ
ಯೋಗಮಾರ್ಗದಿ ಭ್ರಷ್ಟ ಪುಣ್ಯವನು ಮಾಡಿ ಸುಖ
ಭೋಗಿಪರ ನಿತ್ಯವಲ್ಲದ ಲೋಕವ
ಪಡೆದು ಬಹು ವತ್ಸರದಿ ಸುಖಭೋಗಿಸುತಲಿದ್ದು
ಕಡೆಗೆ ಭೂಮಿಯೊಳು ಶುದ್ಧಾತ್ಮರಾದಾ
ಸಿರಿವಂತರಲ್ಲಿ ಹುಟ್ಟುವನಥವ ಧೀಯುಕ್ತ
ವರ ಯೋಗಿಗಳ ಕುಲದಿ ಜನಿಸುತಿಹನು
ಈ ಮಹಾತ್ಮರಲಿ ಈದೃಶ ಜನ್ಮವೇ ಜನ್ಮ
ಈ ಮಹೀಮಂಡಲದಿ ದುರ್ಲಭವಿದೂ
ಕುರುನಂದನನೆ ಅಲ್ಲಿ ಪೂರ್ವದೈಹಿಕವಾದ
ವರಯೋಗಪಥಬುದ್ಧಿ ಸಂಯೋಗವು
ಲಭಿಸುವುದು ಬಳಿಕ ಮತ್ತೂ ಯೋಗ ಸಿದ್ಧ್ಯರ್ಥ
ಶುಭದವೆಂದರಿತು ಯತ್ನವ ಮಾಳ್ಪನೊ(೪೦-೪೩)

ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ
ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ೪೪
ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧ ಕಿಲ್ಬಿಷಃ
ಅನೇಕ ಜನ್ಮ ಸಂಸಿದ್ಧಸ್ತತೋ ಯಾತಿ ಪರಾಂಗತಿಮ್ ೪೫

---

ತ್ರಿ ಪು ಟ ತಾ ಳ

ಷಟ್ಪದೀ:—

ಮುನ್ನೆ ಕೃತ ಅಭ್ಯಾಸದಿಂದಲಿ
ಇನ್ನು ಮನವೆಳೆಯುವುದು ಯೋಗದ
ಉನ್ನತದ ಸನ್ಮಾರ್ಗದಲಿ ಅವಶೋಪಿ ಕೇಳುವನು
ಘನ್ನಯೋಗದ ಮಾರ್ಗವರಿವದ
ರನ್ನೆ ಜಿಜ್ಞಾಸವನೆ ಮಾಡುವ
ಧನ್ಯನವ *ವೇದಗಳತಿಕ್ರಮಿಸುತಲಿ ವರ್ತಿಪನೊ ೪೪

ಅಷ್ಟಪದೀಗದ್ಯಾ:—

ಇನಿತು ಪ್ರಯತ್ನದಿಂದ್ಯೋಗಮಾರ್ಗವ ನಿರುತ
ಅನುಸರಿಪ ಯೋಗಿ ಸಂಶುದ್ಧ ಕಿಲ್ಬಿಷನಾಗಿ
ಘನಸುಯೋಗದ ಸಿಧ್ಯನೇಕ ಜನ್ಮಕೆ ಪಡೆದ
ವನು ಬಳಿಕ ಮೋಕ್ಷ ಪಡೆವಾ
ದಿನದಿನದಿ ಸತ್ಕರ್ಮ ಮಾಡುತಿಪ್ಪರಕಿಂತ
ಘನತಪವ ಮಾಡುತಿಪ್ಪರಕಿಂತ ನಿಗಮಾರ್ಥ
ವನು ಬಲ್ಲ ಜ್ಞಾನಿಗಳಿಗಿಂತ ಯೋಗವ ಮಾಳ್ಪ
ಮನುಜನೇ! ಅತಿ ಶ್ರೇಷ್ಠನೋ
ಅದುಕಾರಣದಿ ಅರ್ಜುನನೆ ಯೋಗಿಯಾಗು ಈ
ವಿಧದ ಬಹು ಯೋಗಿಗಳೊಳಗೆ ಯಾವಾತ ಮ
ತ್ಪದ ಕಮಲಗತ ಮನಸ್ಸುಳ್ಳ ಶ್ರದ್ಧಾಯುಕ್ತ,
ಸದಮನ್ನ ಭಜಿಸುತಿಹನೋ

*ವೇದಗಳಲ್ಲಿ ಹೇಳಿದ ವಿಧಿ ನಿಷೇಧಗಳನ್ನು ಅತಿಕ್ರಮಿಸಿ ಮುಕ್ತನಾಗುತ್ತಾನೆ.

ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ
ಕರ್ಮಿಭ್ಯಶ್ಚಾಧಿಕೋಯೋಗೀ ತಸ್ಮಾದ್ಯೋಗೀ ಭವಾರ್ಜುನ ೪೬

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ
ಶ್ರದ್ಧಾವಾನ್ ಭಜತೇ ಯೋಮಾಂ ಸಮೇಯುಕ್ತ ತಮೋಮತಃ ೪೭

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಧ್ಯಾನಯೋಗೋ**ನಾಮ ಷಷ್ಠೋಽಧ್ಯಾಯಃ

---

ಮುದ ಪಡೆವನವನೆನಗೆ ಯುಕ್ತತಮನೆಂತೆಂಬ
ದಿದು ಎನ್ನ ಮತವೊ ಪಾಂಡವನೆ ಕೇಳೆಂದು ಹೇ
ಳಿದ ಇಂದಿರೇಶ ವಿಠ್ಠಲರಾಯ ಕರುಣದಿಂ
ದಿದ ಕೇಳೊ ಧೃತರಾಷ್ಟ್ರನೇ (೪೫-೪೬-೪೭)

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ "**ಗೀತಾರಂಜನಾ**"ಖ್ಯ ಗ್ರಂಥೇ
**ಧ್ಯಾನಯೋಗೋನಾಮ**
ಷಷ್ಠೋಽಧ್ಯಾಯಃ



ಹರಿಃ ಓಂ

# ಏಳನೆಯ ಅಧ್ಯಾಯ

---

ಶ್ರೀ ಭಗವಾನುವಾಚ:—

ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಞ್ಜನ್ ಮದಾಶ್ರಯಃ
ಅಸಂಶಯಂ ಸಮಗ್ರಂ ಮಾಂ ಯಥಾಜ್ಞಾಸ್ಯಸಿ ತಚ್ಛೃಣು ೧

ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ
ಯಜ್ಜ್ಞಾತ್ವಾನೇಹ ಭೂಯೋಽನ್ಯಜ್ಜ್ಞಾತವ್ಯ ಮವಶಿಷ್ಯತೇ ೨

---

ಷಟ್ಪದೀ ತ್ರಿಪುಟತಾಳ

ಶ್ರೀ ಭಗವಾನುವಾಚ:—

ಮನವ ಎನ್ನಲಿ ನೆಲೆಗೊಳಿಸಿ ಕೇ
ಳನುದಿನದಿ ಎನ್ನಾಶ್ರಯದಿ ಈ
ಘನ ಸುಯೋಗಾಭ್ಯಾಸದಿಂ ಸಂಶಯವನೆಲ್ಲವನು
ಹಣಿಯವಂಥ್ಯಾನೆನ್ನನರಿವೆಯೊ
ನಿನಗೆ ಅದನ್ಹೇಳುವೆನು ಅದರಿಂ
ದನುಪಮದ ವರಯೋಗ ಸಿದ್ಧಿಯ ಪಡೆವೆ ಕೇಳೆಂದ ೧

ನಿನಗೆ ನಾ ವಿಜ್ಞಾನ ಸಹಿತದ
ಅನುಪಮದ ಸುಜ್ಞಾನವೆಂಬೀ
ಘನ ಸುತತ್ವವನೊರೆವೆ ಶೇಷವು ನಿಲ್ಲದಂದದಲಿ
ಮನನ ಮಾಡ್ಯಾವುದನರಿತು ಕೇ
ಳ್ಪನಹ ಜ್ಞಾತವ್ಯದ ಪ್ರವೇಯವು
ಇನಿತು ಮತ್ತೊಂದಿಲ್ಲ ಶೇಷವು ಲೋಕದೊಳು ಕೇಳ್ಳ ೨

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ
ಯತತಾ ಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ವತಃ ೩

ಭೂಮಿರಾಪೋಽನಲೋ ವಾಯುಃ ಖಂ ಮನೋಬುದ್ಧಿರೇವ ಚ
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ೪

ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ೫

---

ಧರೆಯೊಳೊಬ್ಬ ಸಹಸ್ರ ಜನರೊ
ಳ್ವರಸು ಸಿದ್ಧಿಯ ಪಡೆಯಲೋಸುಗ
ನಿರುತ ಯತ್ನವ ಮಾಳ್ಪ ನೀ ದೃಶ ಹಲವು ಸಿದ್ಧರೊಳು
ಪರಸು ಒಬ್ಬಾನೊಬ್ಬನೆನ್ನನು
ಅರಿಳ ನಿಶ್ಚಯದಿಂದ ಆತನೆ
ಪರಮ ಶಾಂತಿಯ ಪಡೆವ ಕೇಳೆಂದನು ಮುರಧ್ವಂಸಿ ೩

ಪದ ಲಾವಣಿ ಆದಿತಾಳ

ಪರಮ ಸುತತ್ವವನೆ - ಅರುಹುವೆ, ನರನೆ ಕೇಳೋ ಇದನೆ ಪ.

ರಹಸ್ಯವೊ ಧರೆಯು ಜಲವು ಅನಲನು ಆಕಾಶವು
ಮರುತ ಮನೋ ಬುಧ್ಯಹಂಕಾರಗಳು ಅ. ಪ.

ಇನಿತೀ ಎಂಟು ವಿಧಾ ಪ್ರಕೃತಿಯು, ಎನಗೆ ಭಿನ್ನವಾದಾ ವೆಂದರ್ಜು
ನನೆ ತಿಳಿಯೋ-ಭೇದ - ಲಕ್ಷಣ
ಇನಿತಿದು ಅಪರ ಪ್ರಕೃತಿಯೋ ಇದಕ
ನ್ಯನುಪಮ ಪರಪ್ರಕೃತಿಯ ಲಕ್ಷಣವನು ೧

ತಿಳಿಯೊ ಚೇತನವಾದ ಪ್ರಕೃತ್ಯೊಬ್ಬಳು, ಲಕ್ಷ್ಮಿಯು ಎಲ್ಲಾ, ಈ ಜಗ
ದೊಳು ವ್ಯಾಪ್ತಳಿದೆಲ್ಲಾ ಧರಿಪಳು
ಶಿಳಿ ಸರ್ವ ಪ್ರಾಣಿಗಳ್ಹುಟ್ಟುವುದಕ್ಕೆ
ಸ್ಥಳವಾದೆರಡೀ ಪ್ರಕೃತಿಯ ಲಕ್ಷಣಾ ೨

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ
ಅಹಂ ಕೃತ್ಸ್ನಸ್ಯ ಜಗತಃ ಪ್ರಭವ ಪ್ರಲಯಸ್ತಥಾ ೬
ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ೭
ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ
ಪ್ರಣವಃ ಸರ್ವ ವೇದೇಷು ಶಬ್ದಃ ಖೇ ಪೌರುಷಂ ನೃಷು ೮

---

ಇಂದಿರೇಶ ವಿಠಲಾ ನಾನೆ ಛಂದಾದಿ ಜಗವೆಲ್ಲಾ
ಸೃಜಿಪೆನು, ಮುಂದೆ ಅದನೆ ಕೊಲ್ಲಲರ್ಹನು ಎಂದಿಗೂ ನಾನೆ
ಯನ್ಯೋರತೊಬ್ಬರು ಹಿಂದುಮುಂದೂ
ಎಂದೆಂದಿಗಿಲ್ಲವೊ ೩

(೪-೫-೬)

ಷಟ್ಪದೀ ರೂಪಕತಾಳ

ಎನಗಿಂತ ಅನ್ಯ ಉತ್ತಮ ಲೇಶವಾದರೂ
ವನರುಹ ಭವಾಂಡದೊಳ ಹೊರಗಿಲ್ಲವೆನ್ನಲ್ಲಿ
ಅನುಗಾಲ ಜಗವೆಲ್ಲ ಪೋಣಿಸಿಹುದೈ ಸೂತ್ರದಲಿ ಮಣಿಗಣ
[ಗಳಂದದಿ
ಮನನ ಮಾಡಿದು ಮುಂದೆ ಹೇಳುವುದರೊಳಗೆಲ್ಲ
ಘನವಾದ ಎನ್ನಧಿಕ ಸಾನ್ನಿಧ್ಯವದರೊಳಿ
ದ್ದನುಗಾಲ ತನ್ನಿಯಾಮಕನಾಗಿ ತಚ್ಛಬ್ದದಿಂದ ಪ್ರಖ್ಯಾತ
[ ನಹೆನೊ ೭

ಪದ ಅಟತಾಳ

ಜಲದಲಿ ರಸನಾನೆ ಚಂದ್ರಸೂರ್ಯರೊಳುಳ್ಳ
ಥಳಥಳಿಸುವ ಕಾಂತಿ ನಾನೆ
ತಿಳಿ ಸರ್ವ ವೇದದಿ ಪ್ರಣವ ನಾನೆ ನಭ
ದೊಳಗುಳ್ಳ ಶಬ್ದಾದಿ ನಾನೆ ೧

ಪುಣ್ಯೋ ಗಂಧಃ ಪೃಥಿವ್ಯಾಂಚ ತೇಜಶ್ಚಾಸ್ಮಿ ವಿಭಾವಸೌ
ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ೯

ಬೀಜಂ ಮಾಂ ಸರ್ವಭೂತೇಷು ವಿದ್ಧಿ ಪಾರ್ಥ ಸನಾತನಂ
ಬುದ್ಧಿರ್ಬುದ್ಧಿ ಮತಾಮಸ್ಮಿ ತೇಜಸ್ತೇಜಸ್ವಿನಾಮಹಂ ೧೦

ಬಲಂ ಬಲವತಾಂ ಚಾಹಂ ಕಾಮರಾಗ ವಿವರ್ಜಿತಃ
ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ೧೧

---

ನರರೊಳು ಪೌರುಷ, ಪುಣ್ಯಗಂಧವು ಕೇಳು
ಧರೆಯೊಳು ನಾನೆ ಅಗ್ನಿಯಲಿ
ಇರುವ ತೇಜವು ನಾನೆ ಜೀವನಾನಾಗಿಪೆ
ಸರುವ ಪ್ರಾಣಿಗಳಂತರದಲಿ ೨

ನಿರುತ ತಪಗಳ ಮಾಡುವವರೊಳು ತಪ ನಾನೆ
ಸರುವ ಪ್ರಾಣಿಗಳಿಗೆ ನಾನೇ,
ಪರಮ ಕಾರಣ ಸನಾತನನೆಂದು ತಿಳಿ ಹೀಗೆ
ಅರಿತವ ಜಗದೊಳು ಧನ್ಯಾ ೩

ನಾನೆ ಬುದ್ಧಿಯು ಬುದ್ಧಿವಂತರೊಳಗೆ ಕೇಳೊ
ನಾನೆ ತೇಜವು ತೇಜಸ್ವಿಗಳೊಳು
ನಾನೆ ಬಲಯುತರೊಳಗಿರ್ಪ ಕಾಮ
ದಿ ರಾಗದಿ ವರ್ಜಿತ ಬಲ ತಿಳಿಯೈ ೪

ಎಲ್ಲಾ ಪ್ರಾಣಿಗಳೊಳು ಧರ್ಮವಿರುದ್ಧವು
ಅಲ್ಲದ ಕಾಮವಾಗಿಹೆನೋ
ಎಲ್ಲ ನಿಯಾಮಕನಾ ಇಂದಿರೇಶ ವಿ
ಠ್ಠಲ್ಲ ಈಪರಿ ಕ್ರೀಡಿಸುವನೊ ೫

(೪-೧೧)

ಯೇ ಚೈವ ಸಾತ್ವಿಕಾಭಾವಾ ರಾಜಸಾಸ್ತಾಮಸಾಶ್ಚಯೇ
ಮತ್ತ ಏವೇತಿತಾನ್ವಿದ್ಧಿ ನತ್ವಹಂ ತೇಷು ತೇ ಮಯಿ ೧೨

ತ್ರಿಭಿರ್ಗುಣ ಮಯೈರ್ಭಾವೈರೇಭಿಃ ಸರ್ವಮಿದಂ ಜಗತ್
ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಂ ೧೩

ದೈವೀಹ್ಯೇಷಾ ಗುಣಮಯೀ ಮಮಮಾಯಾದುರತ್ಯಯಾ
ಮಾಮೇವ ಯೇ ಪ್ರಪದ್ಯಂತೇ ಮಾಯಾ ಮೇತಾಂ ತರಂತಿ ತೇ ೧೪

ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ
ಮಾಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ೧೫

---

ಷಟ್ಪದೀ ರೂಪಕತಾಳ

ಯಾವ ಸತ್ವ ರಜಸ್ತಮೋಗುಣ
ಭಾವಗಳು ಎನ್ನಿಂದಲುದ್ಭವ
ಈ ವಿಧವ ತಿಳಿ ಅದರೊಳಾನಿಹೆ ಅದು ಎನಗೆ ಇಲ್ಲ

ಭಾವಿಸೈ ಈ ಮೂರ್ಗುಣಂಗಳ
ಭಾವದಿಂ ಜಗವೆಲ್ಲ ಮೋಹಿತ
ಯಾವ ಗುಣದಿಂ ಪರನ ಅವ್ಯಯನೆಂದರಿಯರೆನ್ನ

ಈಗ ಕೇಳ್ದೈವ ಸ್ವಭಾವದ
ಭಾಗಿ ಯಾವಾತೆನ್ನ ಸ್ವೈದುವ
ನಾಗಿ ಸೌಖ್ಯವ ಪಡೆವನಾತನು ಮುಕ್ತಿಯೋಗ್ಯಸದಾ

ಈಗುಣತ್ರಯಮಯ ದುರತ್ಯಯ
ವಾಗಿ ನಡೆವ ವಿಕಾರಗಳು ಕ್ರೀಡಾ
ದಿ ಗುಣಯುತನೆನ್ನ ಮಾಯವ ದಾಟುತಿಹನವನು

(೧೨-೧೩-೧೪)

ನರರೊಳಧಮರು ದುಷ್ಕೃತಿಗಳತಿ
ದುರುಳ ಮೂಢರು ದೈತ್ಯಭಾವವ
ನಿರುತ ಆಶ್ರಿತರವರು ತಮಯೋಗ್ಯರು ಸದಾ ಎನ್ನ

ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ೧೬
ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ೧೭
ಉದಾರಾಃ ಸರ್ವ ಏವೈತೇ ಜ್ಞಾನೀತ್ವಾತ್ಮೈವ ಮೇ ಮತಂ
ಆಸ್ಥಿತಃ ಸಹಿಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಂ ೧೮

---

ಪರಮ ಮಾಯದಿ ಜ್ಞಾನವನೆ ಅಪ
ಹರಿಸಲಪ್ಪಟ್ಟಿಂದಿಗೆಂದಿಗು
ನರನೆ ಕೇಳೆನ್ನನುಪಮದ ಪದವೈದರಿವರೆಂದ ೧೫

ಪರಮ ಸುಕೃತಿಗಳೆನ್ನ ಭಜಿಸುವ
ರರಿಯೊ ನಾಲಕು ವಿಧದ ಜನ ಕೇ
ಳ್ಪರಮ ಜ್ಞಾನಿ ಜಿಜ್ಞಾಸು ಆರ್ತನು ಮತ್ತು ಅರ್ಥಾರ್ಥಿ
ಪರನೊಳೇಕ ಪ್ರಕಾರ ಭಕ್ತಿಯ
ನಿರುತ ಮಾಡುವ ಜ್ಞಾನಯುಕ್ತನು
ವರನೊ ಈ ವಿಧ ನಾಲ್ಕು ಜನರೊಳಗೆಂದನಸುರಾರಿ

ಜ್ಞಾನಿಗಾನತಿ ಪ್ರಿಯನೊ ಕೇಳಾ
ಜ್ಞಾನಿ ಎನಗತಿ ಪ್ರಿಯ ಚತುರ್ವಿಧ
ಮಾನವರು ಉತ್ತಮರು ಸದ್ಗತಿಗರ್ಹರದರೊಳಗೆ
ಜ್ಞಾನಿ ಮುಖ್ಯನೊ ಎನ್ನ ಧ್ಯಾನವ
ಮಾಣದಲೆ ಮಾಡುವನವನ ಮ
ತ್ಪ್ರಾಣವಂದದಿ ನೋಳ್ಪುದೆನಗದು ಮತವೊ ಕೇಳೆಂದ
(೧೬-೧೭)

ಅದು ನಿಮಿತ್ತದಿ ಆತ ಎನ್ನೊಳು
ಸದಮಲೋತ್ತಮ ವಿವಿಧ ಗತಿಗಳ
ಪ್ರದನೆನುತ ಎನ್ನರಿತು ಯುಕ್ತಾತ್ಮನು ಸುಖದೊಳಿರುವ

ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ೧೯

ಕಾಮೈಸ್ತೈಸ್ತೈರ್ಹೃತಜ್ಞಾನಾ ಪ್ರಪದ್ಯಂತೇಽನ್ಯ ದೇವತಾಃ
ತಂತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ೨೦

---

ಮುದದಿ ಕೇಳೀ ಯೋಗ್ಯ ಜೀವನು
ವಿಧವಿಧದ ಬಹು ಜನ್ಮ ಗತಿಸಿದ
ತುದಿಯ ಜನ್ಮದಿ ಜ್ಞಾನಿಯಾಗ್ಯವ ನೆನ್ನನೈದುವನೊ ೧೮

ಸರ್ವ ವ್ಯಾಪಕ ವಾಸುದೇವನು
ಸರ್ವ ವಿಧದಿಂದೆನ್ನ ರಕ್ಷಕ
ಸರ್ವ ಕರ್ಮವ ಮಾಡಿಸುವ ಸರ್ವೇಶನೆಂದರಿದು
ಸರ್ವ ಕಾಲದಿ ಭಜಿಸುತಿಹ ನರ
ಸರ್ವ ಸೌಖ್ಯವ ಪಡೆವ ನೀ ದೃಶ
ಸರ್ವ ಶ್ರೇಷ್ಠ ಮಹಾತ್ಮ ಲೋಕದಿ ದುರ್ಲಭನು ಕೇಳೊ ೧೯

ಪದ ಅಟತಾಳ

ಅಸುರ ಸ್ವಭಾವವುಳ್ಳವರು, ಎನ್ನ
ಅಸಮ ಸರ್ವೇಶ ನೆಂದರಿಯದೆ ಕೆಡುವರು ಪ.

ಎನ್ನ ಭಾವಿಸದೆ ಸರ್ವರೊಳು, ಬಹು
ಅನ್ಯ ದೇವತೆಗಳ ಭಜಿಸಲು ಕೇಳು
ಇನ್ನು ತತ್ತನ್ನಿಯಮಗಳ, ನೈದಿ
ಚೆನ್ನಾಗಿ ಭಜಿಪರೊ ಮಂದಮತಿಗಳು ೧

ಕುಮತಿಗಳ್ಗಮತವ್ಮನಾದಿ, ಯೋಗ್ಯ
ತೆ, ವಿಾರವೆ ಅದರಿಂದ ನಿಯತರಾಗಿಹದಿ,
ಅಮಿತ ಕಾಮಗಳಿಂದ ಭರದೀ, ಹೃತ
ವಿಮಲ ಜ್ಞಾನವುಳ್ಳವರು ದಿನದಿನದಿ ೨

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತು ಮಿಚ್ಛತಿ
ತಸ್ಯತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ೨೧

ಸತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನ ಮೀಹತೇ
ಲಭತೇಚ ತತಃ ಕಾಮಾನ್ ಮಯ್ಯೈವ ವಿಹಿತಾನ್ ಹಿತಾನ್ ೨೨

ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪ ಮೇಧಸಾಂ
ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ
[ ಮಾಮಪಿ ೨೩

---

ಆವಾವ ಪುರುಷ ಲೋಕದಲಿ, ಕೇಳು
ಆವ ಬ್ರಹ್ಮಾದಿ ಮೂರ್ತಿಗಳ ಭಕ್ತಿಯಲಿ
ಭಾವ ಶುದ್ಧಿಯೊಳು ಭಜಿಸಲು, ಇಚ್ಛಿ
ಸೂವನೊ ಅವನವನಿಗೆ ಈ ವಿಧದಲಿ ೩

ಚಲಿಸದ ಶ್ರದ್ಧೆ ಅವರೊಳು, ನಾನೆ
ಕೆಲಕಾಲ ಕೊಟ್ಟು ಸ್ಥಿರಪಡಿಸುವೆ ಕೇಳೊ
ಫಲಕಾಮಿ ನಿತ್ಯ ಅವರೊಳು, ಶ್ರದ್ಧೆ
ಯಲಿ ಪೂಜೆ ಮಾಡುತಿರುವನು ಲೋಕದೊಳು ೪

ವಿ-ಹಿತವಾದ ಕಾಮ ಫಲವನು, ಆ ದೇ
ವತೆಗಳೊಳಗೆ ಇದ್ದೆನ್ನಿಂದಾಲೆ ಅವನು
ಸತತ ಪಡೆವ ಕೇಳೊ ಇದನು, ಕುಂತೀ
ಸುತನೆ ಇಂದಿರಾಪತಿ ವಿಠಲನೊ ನಾನು ೫

(೨೦-೨೨)

ಷಟ್ಪದೀ ತ್ರಿಪುಟತಾಳ

ಜಡಮತಿಗಳಿವರಾದರಿಂದೀ
ಪಡೆವ ಫಲಗಳನಿತ್ಯವಾದುವು
ಕೆಡಿಸುವುವು ಪಡೆವವರ, ದೇವತೆಗಳನೆ ಭಜಿಪಾ

ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ
ಪರಂಭಾವಮಜಾನಂತೋ ಮಮಾವ್ಯಯಮನುತ್ತಮಂ ೨೪

ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾ ಸಮಾವೃತಃ
ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಂ ೨೫

ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ
ಭವಿಷ್ಯಾಣಿ ಚ ಭೂತಾನಿ ಮಾಂತು ವೇದ ನ ಕಶ್ಚನ ೨೬

---

ಜಡರು ದೇವತೆಗಳನೆ ಐದುವ
ರಡಿಗಡಿಗೆ ಮರೆಯುವರೆ ಎನ್ನೊಳು
ಬಿಡದೆ ಭಕ್ತಿಯ ಮಾಡುತಿಪ್ಪರು ಎನ್ನನೈದುವರು ೨೩

ಪರಮ ನವ್ಯಯ ನಿರುಪಮನ ಎ
ನ್ನಿರವನರಿಯದ ಮತಿವಿಹೀನರು
ಧರೆಯೊಳಗೆ ಪ್ರಾಕೃತ ಶರೀರವದಿಲ್ಲದಿಹ ನಾನು
ನರನೆ, ದೇಹದಿ ವ್ಯಕ್ತನಾಗಲು
ನರನಿವನು ಪ್ರಾಕೃತ ಶರೀರಿಯೆಂ
ದರಿವರಲ್ಲದೆ ನೈಜರೂಪದೊಳೆನ್ನ ದರ್ಶಿಸರ್ ೨೪

ಎಲ್ಲ ಜನರಿಗು ನಾ ಪ್ರಕಾಶಿಪ
ನಲ್ಲ ಪ್ರಬಲದ ಯೋಗದಿಂದಲು
ಮಲ್ಲದತಿಶಯ ಮಾಯೆಯಿಂದಲು ನಾ ಸಮಾವೃತನೈ
ಬಲ್ಲದನು, ನಾ ಜನನ ಮರಣಗ
ಳಿಲ್ಲದಿಹ ಸರ್ವೇಶನೆಂದೆನು
ತೆಲ್ಲರರಿಯರೊ ಪಾರ್ಥ ಕೇಳೆಂದನು ರಮಾಧವನು ೨೫

ಮುನ್ನತೀತರ ವರ್ತಮಾನರ
ಇನ್ನು ಮುಂದೆ ಭವಿಷ್ಯ ಪ್ರಾಣಿಗ
ಳನ್ನೆ ನಾ ಬಲ್ಲೆನು ತ್ರಿಕಾಲಜ್ಞಾನಿ ನಾ ಕೇಳೈ

ಇಚ್ಛಾದ್ವೇಷ ಸಮುತ್ಥೇನ ದ್ವಂದ್ವ ಮೋಹೇನ ಭಾರತ
ಸರ್ವ ಭೂತಾನಿ ಸಂಮೋಹಂ ಸರ್ಗೇಯಾಂತಿ ಪರಂತಪ ೨೭

ಯೇಷಾಂ ತ್ವಂತಗರ್ತಂ ಪಾಪಂ ಜನಾನಾಂ ಪುಣ್ಯ ಕರ್ಮಣಾಂ
ತೇ ದ್ವಂದ್ವ ಮೋಹ ನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ೨೮

ಜರಾಮರಣ ಮೋಕ್ಷಾಯ ಮಾಮಾಶ್ರಿತ್ಯ ಯತಂತಿಯೇ
ತೇ ಬ್ರಹ್ಮ ತದ್ವಿದುಃಕೃತ್ಸ್ನ ಮಧ್ಯಾತ್ಮಂ ಕರ್ಮಚಾಖಿಲಂ ೨೯

---

ಎನ್ನ ಸಾಕಲ್ಯದಲಿ ಒಬ್ಬನು
ಮುನ್ನೆ ಈಗಲು ಮುಂದೆ ಎಂದಿಗು
ಸನ್ನುತಾನಂತಮಿತ ಮಹಿಮನ ಅರಿವರಿಲ್ಲೆಂದ ೨೬

ಎಲೆ ಪರಂತಪ ಕೇಳು ವಿಷಯದಿ
ಬಲಿತ ಇಚ್ಛಾದ್ವೇಷದಿಂದಲಿ
ಹಲವು ಜನಿಸುವ ದ್ವಂದ್ವ ಮೋಹದಿ ಸರ್ವ ಪ್ರಾಣಿಗಳು
ಇಳೆಯೊಳಗೆ ಸಮ್ಮೋಹಪ್ರದವಾ
ದ್ಹಲವು ಜನ್ಮವನೈದುವರು, ನಿ
ರ್ಮಲ ಸುಪುಣ್ಯವ ಮಾಳ್ಪ ಲೋಕದೊಳ್ಯಾವ ಮನುಜರಿಗೆ ೨೭

ಘೋರ ಪಾಪವು ಕೆಡುವುದೋ ಆ
ಸೂರಿಗಳು ತದ್ವಂದ್ವ ಮೋಹವ
ದೂರಮಾಡ್ಯದರಿಂದ ನಿರ್ಮುಕ್ತರು ಸದಾ ಎನ್ನ
ಧೀರ ಸುದೃಢವ್ರತರು ಅನುಪಮ
ಚಾರುತರ ಸನ್ಮಹಿಮೆ ಅರಿತು ಅ
ಪಾರ ಗುಣನಿಧಿಯೆಂದು ಭಜಿಸುವರೆಂದನಸುರಾರಿ ೨೮

ಜರೆ ಮರಣ ಭಯ ಹಿಂಗಲೋಸುಗ
ಧರೆಯೊಳಗೆ ಆವಾತನೆನ್ನನು
ನಿರುತ ಆಶ್ರೈಸ್ಯತ್ನ ಮಾಳ್ಪನೊ ಆ ಪುರುಷ ಕೇಳ್ವೆ

ಸಾಧಿ ಭೂತಾಧಿ ದೈವಂ ಮಾಂ ಸಾಧಿಯಜ್ಞಂಚ ಯೇವಿದುಃ
ಪ್ರಯಾಣ ಕಾಲೇಪಿ ಚ ಮಾಂ ತೇ ವಿದುರ್ಯುಕ್ತ ಚೇತಸಃ ೩೦

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಜ್ಞಾನವಿಜ್ಞಾನಯೋಗೋನಾಮ**
ಸಪ್ತಮೋಧ್ಯಾಯಃ

---

ಅರಿವನೀ ಬ್ರಹ್ಮಸ್ವರೂಪವ
ಅರಿವನೆಲ್ಲಧ್ಯಾತ್ಮಲಕ್ಷಣ
ಅರಿವನೆಲ್ಲ ಸುಕರ್ಮ ದುಷ್ಕರ್ಮಗಳ ಲಕ್ಷಣವ ೨೯

ಆವನೆನ್ನಧಿಭೂತಸಹ ನಧಿ
ದೈವಸಹ ನಧಿಯಜ್ಞನೆಂದೀ
ಭಾವ ಬಲ್ಲವ ಯುಕ್ತ ಚೇತಸ ಮರಣಗಾಲದಲಿ
ಏವಮಾದಿ ಮಹಾಮಹಿಮನೆಂ
ದೀ ವಿಧನು ಎನ್ನರಿವ ಪಾರ್ಥನೆ
ಕೋವಿದನು ಸುಖ ಪಡೆವ ನೀ ದೃಶನೆಂದನಸುರಾರಿ ೩೦

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ **"ಗೀತಾರಂಜನಾ"**ಖ್ಯ ಗ್ರಂಥೇ
**ಜ್ಞಾನವಿಜ್ಞಾನಯೋಗೋನಾಮ**
ಸಪ್ತಮೋಧ್ಯಾಯಃ



ಹರಿಃ ಓಂ

# ಎಂಟನೆಯ ಅಧ್ಯಾಯ

ಅರ್ಜುನ ಉವಾಚ:—

ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ
ಅಧಿ ಭೂತಂಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ೧

ಅಧಿ ಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ ಮಧುಸೂದನ
ಪ್ರಯಾಣ ಕಾಲೇಚ ಕಥಂಜ್ಞೇಯೋಽಸಿ ನಿಯತಾತ್ಮಭಿಃ ೨

---

ಪದ ರಾಗ ಕೇದಾರಗೌಳ ರೂಪಕತಾಳ

ಹೇಳೊ ಕೃಷ್ಣನೆ ಹೇಳೋ ಕೃಷ್ಣನೆ ಪ.
ದೀನಪಾಲಾ ಗಾನಲೋಲಾ ಅ.

ಆವುದೊ ತದ್ಬ್ರಹ್ಮವರಿಯೆ, ಆವುದೊ ಅಧ್ಯಾತ್ಮ ಧೊರೆಯೇ
ಆವುದೊ ಕರ್ಮಂಗಳೆನಗೆ, ನೀ ನೊಲಿದಾ ವಿಧವು ೧

ಆವುದೊ ಅಧಿಭೂತವರಿಯೆ, ಆವುದೊ ಅಧಿದೈವ ಧೊರೆಯೆ
ಈ ವಿಧವನೆ ವಿಸ್ತರಿಸಿ ಕೃಪಾವಲೋಕನದಿಂದ್ಹೇಳೊ ೨

ಆವುದೊ ಅಧಿಯಜ್ಞವರಿಯೆ, ಆವ ತತ್ಪ್ರತಿಪಾದ್ಯ ಧೊರೆಯೆ
ಆವುದೊ ಈ ತನುವಿನೊಳು ರಮಾವರ ನೀ ನೊಲಿದು ೩

ನಿಯಮಿತಾತ್ಮರಿಂದ ತನೂ - ಲಯದ ಕಾಲದಲಿ ನೀನು
ದಯದಿ ಒಲಿದು ಜ್ಞೇಯನೆಂತಾಗುವೆಯೋ ಮುರಾರಿ ಇದನೆ ೪

ಇಂದಿರೇಶ ವಿಠಲ ಕೇಳೊ, ಮಂದರಾದ್ರಿಧರ ಕೃಪಾಳೊ
ಇಂದು ಎನ್ನ ಸಂಶಯ ಕೆಡಿಸೆಂದು ಬೇಡಿಕೊಂಬೆ ೫

(೧-೨)

ಶ್ರೀ ಭಗವಾನುವಾಚ:—

ಅಕ್ಷರಂ ಬ್ರಹ್ಮಪರಮಂ ಸ್ವಭಾವೋಽಧ್ಯಾತ್ಮ ಮುಚ್ಯತೇ
ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ೩

ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಂ
ಅಧಿಯಜ್ಞೋಽಹಮೇವಾತ್ರ ದೇಹೇ ದೇಹ ಭೃತಾಂವರ ೪

ಅಂತಕಾಲೇಚ ಮಾಮೇವ ಸ್ಮರನ್ ಮುಕ್ತ್ವಾ ಕಳೇಬರಂ
ಯಃ ಪ್ರಯಾತಿ ಸ ಮದ್ಭಾವಂ ಯಾತಿನಾಸ್ತ್ಯತ್ರ ಸಂಶಯಃ ೫

---

ಷಟ್ಪದೀ ತ್ರಿಪುಟತಾಳ

ಪರಮ ಅಕ್ಷರನೆಂಬ ಹರಿಯೇ
ನರನೆ ಕೇಳೈ ಬ್ರಹ್ಮನೆನಿಪನೊ
ಮರುಳೆ ಜೀವಧ್ಯಾತ್ಮನೆನಿಪನೊ ಜಡ ಪದಾರ್ಥಗಳ
ಧರೆಯೊಳಗೆ ಪ್ರಾಣಿಗಳ ಸೃಜಿಸುವ
ಹರಿಯು ಸದ್ವ್ಯಾಪಾರದಿಚ್ಛೆಗೆ
ಪರಮ ಜ್ಞಾನಿಗಳ್ಹೇಳುವರು ಕರ್ಮಂಗಳೆಂದೆನುತ ೩

ಜಡವ ಕೇಳಧಿಭೂತವೆನುತಲಿ
ನುಡಿಯುವರು ಶಾಶ್ವತದೆ ನಿಲ್ಲದೆ
ಕೆಡುವ ಭಾವವು ಉಳ್ಳುದಿದು ಕಮಲಾಸನನೆ ಮತ್ತು
ಪೊಡವಿಯೊಳ ಗಧಿದೈವನೆನಿಪನೊ
ಬಿಡದೆ ದೇಹದಿ ವಾಸವಾಗಿಹ
ಒಡೆಯ ನಾನಧಿಯಜ್ಞ ನೆಂದೆನಿಸುವೆನೊ ಕೇಳೆಂದಾ ೪

ಮರಣ ಕಾಲದಿ ಎನ್ನನಾವನು
ಸ್ಮರಿಸುತಲಿ ದೇಹವನೆ ಬಿಡುತಿಹ
ಪುರುಷ ಪಡೆವ ಸುಖಾನುರೂಪ ಸ್ಥಿತಿಯ ನೆನ್ನಲ್ಲಿ

ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇಬರಂ
ತಂ ತಮೇವೈತಿ ಕೌಂತೇಯ ಸದಾ ತದ್ಭಾವ ಭಾವಿತಃ ೬

ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುದ್ಧ್ಯಚ
ಮಯ್ಯಾರ್ಪಿತ ಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ೭

ಅಭ್ಯಾಸ ಯೋಗ ಯುಕ್ತೇನ ಚೇತಸಾ ನಾನ್ಯಗಾಮಿನಾ
ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ೮

---

ಮರಣಗಾಲದೊಳಾವುದಾವು
ದರಿವ ಭಾವಿಸುತಲಿ ಸ್ವದೇಹವ
ಪರಿಹರಿಸುವನೊ ತತ್ಸದೃಶ ಜನ್ಮವನೆ ಐದುವನೊ

ನರನು ಇಂತನುದಿನದಿ ಎನ್ನಯ
ಇರವ ಭಾವಿಸುತಿಪ್ಪನಂತ್ಯದಿ
ಪರಮ ಸಾರೂಪ್ಯವನು ಪಡೆವನು ಅದು ನಿಮಿತ್ತದಲಿ
ಇರುಳು ಹಗಲೇಕ ಪ್ರಕಾರದಿ
ನಿರುತ ಎನ್ನನು ಸ್ಮರಿಸು ಯುದ್ಧವ
ತ್ವರದಿ ಮಾಡೆನ್ನಲ್ಲಿ ಬುದ್ಧಿಮನಗಳನರ್ಪಿಸುತ

ಎನ್ನನೈದುವಿ ಸಂಶಯವು ಇ
ಲ್ಲಿನ್ನು ಬಯಸದೆ ಆವುದೊಂದನ
ನನ್ಯಯೋಗಾಭ್ಯಾಸಯುತ ಚಿತ್ತದಲಿ ಅನುದಿನದಿ
ಘನ್ನದಿವ್ಯೋತ್ಕೃಷ್ಟ ಸತ್ಪುರು
ಷನ್ನ ಸ್ಮರಿಸುತ ಜನರು ತತ್ಪದ
ವನ್ನೈದುತಲಿಹರು ತಿಳಿಯೆಂದನು ಮುರಧ್ವಂಸಿ

(೫-೬-೭-೮)

ಕವಿಂ ಪುರಾಣ ಮನುಶಾಸಿ ತಾರ ಮಣೋರಣೀಯಾಂ ಸಮನು
[ಸ್ಮರೇದ್ಯಃ
ಸರ್ವಸ್ಯ ದಾತಾರ ಮಚಿಂತ್ಯರೂಪ ಮಾದಿತ್ಯ ವರ್ಣಂ ತಮಸಃ
[ ಪರಸ್ತಾತ್ ೯
ಪ್ರಯಾಣಕಾಲೇ ಮನಸಾऽಚಲೇನ ಭಕ್ತ್ಯಾ ಯುಕ್ತೋ ಯೋಗ
[ ಬಲೇನ ಚೈವ
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್ ಸ ತಂ ಪರಂ ಪುರುಷ
[ ಮುಪೈತಿ ದಿವ್ಯಂ ೧೦
ಯದಕ್ಷರಂ ವೇದವಿದೋ ವದಂತಿ ವಿಶಂತಿ ಯದ್ಯತಯೊ ವೀತರಾಗಾಃ
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇಪದಂ ಸಂಗ್ರಹೇಣ
[ ಪ್ರವಕ್ಷ್ಯೇ ೧೧

---

ಸರ್ವವನು ಬಲ್ಲವ ಪುರಾತನ
ಸರ್ವಲೋಕ ನಿಯಾಮಕನ ಕೇ
ಳ್ಸರ್ವಕಿಂತಲು ಅಣುವಿಗತಿ ಅಣುವಾಗಿ ಮೆರೆಯುವನ
ಸರ್ವ ಲೋಕಂಗಳಿಗೆ ರಕ್ಷಕ
ಸರ್ವರಿಂದಲು ಚಿಂತ್ಯರೂಪನ
ಸರ್ವಶ್ರೇಷ್ಠ ನನಂತ ರವಿನಿಭ ಮೃತ್ಯುವರ್ಜಿತನಾ
ಮರಣ ಕಾಲದೊಳಾವ ಪುರುಷನು
ಸ್ಥಿರದಿ ಚಲಿಸದ ಮನದಿ ಧೈರ್ಯದಿ
ಪರಮ ಶ್ರದ್ಧಾಯುಕ್ತ ಯೋಗದ ಬಲದಿ ಚೆನ್ನಾಗಿ
ಇರಿಸಿ ಭ್ರೂ ಮಧ್ಯದಲಿ ಪ್ರಾಣವ
ಸ್ಮರಿಸುತಲಿ ಪರಮಾತ್ಮ ನಿರವನು
ಪರಮ ದಿವ್ಯ ಸುಪುರುಷ ನೈದುವನವನು ಕೇಳೆಂದ (೯ ೧೦)
ವೇದವಿದರಾವುದನೆ ಅಕ್ಷರ (ಅಕ್ಷರ+ಅನಾದಿ)
ನಾದಿಯೆಂದ್ಹೇಳುವರೊ ಕೇಳ್ವೈ
ಹೋದರಾಗವನುಳ್ಳ ಯತಿಗಳು ಹೊಗುವರಾವುದನು

ಸರ್ವದ್ವಾರಾಣಿ ಸಂಯಮ್ಯ ಮನೋಹೃದಿ ನಿರುಧ್ಯಚ
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಂ೧೨
ಓಮಿತ್ಯೇಕಾಕ್ಷರಂ ಬ್ರಹ್ಮವ್ಯಾಹರನ್ ಮಾಮನುಸ್ಮರನ್
ಯಃ ಪ್ರಯಾತಿ ತ್ಯಜನ್ದೇಹಂ ಸಯಾತಿ ಪರಮಾಂ ಗತಿಂ ೧೩
ಅನನ್ಯ ಚೇತಾಸ್ಸತತಂ ಯೋಮಾಂ ಸ್ಮರತಿ ನಿತ್ಯಶಃ
ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ೧೪

---

ಮೇದಿನಿಯೊಳಾವುದನಪೇಕ್ಷಿಸಿ
ಸಾಧಿಪರೊ ವರಬ್ರಹ್ಮ ಚರ್ಯವ
ಬೋಧಿಸುವೆ ನಿನಗವನು ಕೇಳ್ ಸಂಕ್ಷೇಪದಿಂದೆಂದ ೧೧

ಅಷ್ಟಪದೀಗದ್ಯ:—

ಎಲ್ಲ ಇಂದ್ರಿಯಗಳನೆ ನಿಗ್ರಹಿಸಿ ಮನವ ಸಿರಿ
ವಲ್ಲಭನ ಧ್ಯಾನದಲಿ ನೆಲೆಗೊಳಿಸಿ ಚಲಿಸಧ್ವಾ
ಗೆಲ್ಲು ತನ್ನಯ ಪ್ರಾಣವಾಯುವನು ಮೂರ್ಧ್ನಿಯಲಿ
ನಿಲ್ಲಿಸುತ ಹರುಷದಿಂದಾ

ಸಲ್ಲಲಿತ ಯೋಗಧಾರಣದಿ ಸಂಸ್ಥಿತನಾಗಿ
ಎಲ್ಲ ವೇದಕೆ ಮೂಲವಾದ ಓಂ ಎಂಬ ಈ
ಬಲ್ಲಿದ ಪರಬ್ರಹ್ಮ ವಾಚಕೊಂದಕ್ಷರವ
ಮೆಲ್ಲನೆ ಉಚ್ಚರಿಸುತ ೧

ಪುರುಷನಾವನು ಎನ್ನ ಸ್ಮರಿಸುತಲಿ ದೇಹವನು
ಪರಿಹರಿಸಿ ಪೋಪನೋ ಅವನು ಉತ್ಕೃಷ್ಟವಾ
ದ್ಧರಿಯ ಸಾನ್ನಿಧ್ಯವೆಂಬುವ ಗತಿಯ ಪಡೆವ ಹೇ
ಕುರುನಂದನನೆ ಕೇಳಿದಾ

ನಿರುತ ಯಾವಾತನನ್ಯವ ನೊಂದ ಚಿಂತಿಸದೆ
ಸ್ಮರಿಸುತೆನ್ನಿರವ ಯಾವಜ್ಜೀವ ಪರಿಯಂತ
ವರಸುಯೋಗಾಭ್ಯಾಸ ಮಾಳ್ಪನಾ ಯೋಗಿಗಾಂ
ಪರಮ ಸತ್ಸುಲಭನೆಂದಾ (೧೨-೧೩-೧೪)

ಮಾಮುಪೇತ್ಯ ಪುನರ್ಜನ್ಮ ದುಃಖಾಲಯ ಮಶಾಶ್ವತಂ
ನಾಪ್ನುವಂತಿ ಮಹಾತ್ಮಾನ ಸ್ಸಂಸಿದ್ಧಿಂ ಪರಮಾಂಗತಾಃ ೧೫

ಆ ಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ೧೬

ಸಹಸ್ರ ಯುಗ ಪರ್ಯಂತ ಮಹರ್ಯದ್ಬ್ರಹ್ಮಣೋ ವಿದುಃ
ರಾತ್ರಿಂ ಯುಗ ಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ೧೭

ಅವ್ಯಕ್ತಾದ್ವ್ಯಕ್ತ ಯಸ್ಸರ್ವಾಃ ಪ್ರಭವಂತ್ಯಹರಾಗಮೇ
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತ ಸಂಜ್ಞಕೇ ೧೮

---

ಅರ್ಥ:—

ಎನ್ನನೈದಿದಾ ಬಳಿಕೆಂದಿಗು ಕೇಳಿನ್ನು ಅಶಾಶ್ವತವಾದಂಥ
ಬನ್ನ ಬಡುವುದಕೆ ಮನೆಯಾಗಿರುತಿಹ ಜನ್ಮನೈದ ಧರೆಯೊಳಗಾತಾ ೧

ಪರ ಮಹಾತ್ಮನುತ್ಕೃಷ್ಟ ಸಿದ್ಧಿಯೈದಿರುವನೊ ಪರಮಾನಂದದಲೀ
ಭರಿತನಾಗಿ ಸುಖ ಸಾಗರದಲಿ ಸಂಚರಿಸುತೇಳುತಲಿ ಮುಳುಗುತಲೀ ೨

ಮೇರುನಗದ ಮೂರ್ಧ್ನಿಯೊಳಿರುತಿಹುದಾ ವಾರಿಜಭವನ ಸದನ ಮೊದಲೀ
ಧಾರುಣಿ ಕೆಳಗಿನ ಮೇಲಣ ಲೋಕವ ಸೇರಿದವರು ಧರೆಯಲಿ ಮರಳೀ ೩

ಜನ್ಮನೈದುವವು ಕೇಳು ಪಾಂಡವನೆ ಎನ್ನನೈದಿದಾ ಬಳಿಕೆಂದೂ
ಜನ್ಮವಿಲ್ಲ ಮರಳೀಲೋಕದಿ ಕೇಳಿನ್ನು ಹೇಳುವೆನು ನಾನಿಂದೂ ೪

ಬಹು ಯುಗ ಗತಿಸಲು ಅದು ಪರಮಾತ್ಮನಿಗಹವೆನುತಲಿ ಬಲ್ಲರು ಬುಧರು
ಬಹು ಯುಗ ಗತಿಸಲು ರಾತ್ರಿಯಹುದು ಹರಿಗೆಂಬರು ಕಾಲಜ್ಞರು ಕೇಳೈ ೫

ಹಗಲ,-ವ್ಯಕ್ತಾಭಿಧ ಪರಮಾತ್ಮನೊಳಗೆ ಅಡಗಿದ್ದ ಪ್ರಾಣಿಗಳೆಲ್ಲಾ
ಬಗೆಬಗೆಯಿಂದಲಿ ವ್ಯಕ್ತರಹರು, ರಾತ್ರಿಗೆ ಪ್ರಾರಂಭಾಗಲು ಎಲ್ಲಾ ೬

ಭೂತಗ್ರಾಮಸ್ಸ ಏವಾಯಂ ಭೂತ್ವಾಭೂತ್ವಾ ಪ್ರಲೀಯತೇ
ರಾತ್ರ್ಯಾಽಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ೧೯

ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ
ಯಸ್ಸ ಸರ್ವೇಷು ಭೂತೇಷು ನಶ್ಯತ್ಸು ನವಿನಶ್ಯತಿ ೨೦

ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ
ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ೨೧

---

ಅವ್ಯಕ್ತಾಭಿದನಲ್ಲಿ ಅಡಗುವ ರವ್ಯಯರೀಪರಿ ದಿನದಿನದೀ
ಅವ್ಯಕ್ತನ ರಾತ್ರಿಯೊಳ್ವಶರು ಕೇಳವ್ಯಕ್ತಾಭಿದ ಹರಿಯುಹದೀ ೭

ಮುಕ್ತರಾದ ಜೀವರು ಬಹು ಸುಖದಿಂ ವ್ಯಕ್ತರಾಗಿ ಸಂಚರಿಸುವರು
ವ್ಯಕ್ತರಾಗಿ ಸೃಷ್ಟಿಗೆ ಬರುತಿಪ್ಪರು ಮುಕ್ತರಲ್ಲದ ರಾಶೀಕೃತರು ೮

ಈ ಪರಿ ಹುಟ್ಟುತ ಅಡಗುತಲಿಹುದೈ ಆ ಪರಮಾತ್ಮನ ದೇಹದಲೀ
ತಾ ಪರಿಪಾಲಿಪ ಪಾರ್ಥನೆ ಕೇಳಿಂದಿರಾಪತಿ ವಿಠಲನು ಕರುಣದಲಿ ೯

(೧೫-೨೦)

ಷಟ್ಪದೀ ತ್ರಿಪುಟತಾಳ

ಇದಕ್ಕೆ ಭಿನ್ನಾವ್ಯಕ್ತ ಪರಮನು
*ಸದ (ಸತ್) ಸನಾತನ ಸರ್ವ ಭೂತಗ
ಳುದಿಸಿ ಕೆಡುತಿರೆ ನಾಶಹೊಂದನು ಪೂರ್ಣನಾತಿದವನು
ಚೆದರಿ ಕೆಡನವ್ಯಕ್ತನೆಂದೀ
ವಿಧದಿ ಅಕ್ಷರನೆಂದು ಕರೆಸುವ
ಸದಯನಿವನುತ್ಕೃಷ್ಟ ಗತಿಯಂದ್ಹೇಳುವರು ಬುಧರು ೨೧

*ಸ್ವತಂತ್ರನಾದವನು.

ಪುರುಷಸ್ಸಪರಃ ಪಾರ್ಥ ಭಕ್ತ್ಯಾಲಭ್ಯಸ್ತ್ವನನ್ಯಯಾ
ತಸ್ಯಾಂತಃ ಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ೨೨

ಯತ್ರ ಕಾಲೇ ತ್ವನಾವೃತ್ತಿ ಮಾವೃತ್ತಿಂ ಚೈವ ಯೋಗಿನಃ
ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ೨೩

ಅಗ್ನಿರ್ಜ್ಯೋತಿರಹಶ್ಶುಕ್ಲಃ ಷಣ್ಮಾಸಾ ಉತ್ತರಾಯಣಮ್
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ೨೪

---

ನರರು ಪಡೆದಾವುದನು ಧರೆಯಲಿ
ಮರಳಿ ತಿರುಗರೊ ತತ್ಪರಮವಾ
ಗಿರುವ ಎನ್ನಯ ಧಾಮವರಿಯೆಂದನು ಮುರಧ್ವಂಸೀ
ಪುರುಷನಾವವನೊಳಗೆ ಪ್ರಾಣಿಗ
ಳಿರುವರೀ ಜಗವೆಲ್ಲ ವ್ಯಾಪಿಸಿ
ಇರುವನಾವನೊ ಅವನು ಪರಮುನನನ್ಯಭಕುತಿಯಲಿ ೨೨

ದೊರಕುತಿಹನರ್ಜುನನೆ ಕೇಳ್ಳೈ
ಪರಮಯೋಗಿಗಳಾವ ಕಾಲದಿ
ಪರಿಹರಿಸಿ ತನು ಪೋಪರಿಗೆ ಈ ಧರೆಯೊಳಗೆ ಮರಳಿ
ಮರಳಿ ಜನ್ಮಗಳಿಲ್ಲದಿಹದನು
ಮರಳಿ ಜನಿಸುವ ಕಾಲವನು ನಿನ
ಗೊರೆವೆ ಪಾಂಡುಕುಮಾರ ತಿಳಿಯೆಂದನು ರಮಾಧವನು ೨೩

ಸೀಸಮಾಲಿಕಾ:—

ಅನಲ ಜ್ಯೋತಿಯು ಹಗಲು ಶಿತಪಕ್ಷ ಉತ್ತರಾ
ಯಣಕೆ ಷಣ್ಮಾಸಕಭಿಮಾನಿಯಾದಾ
ಸುರರ ಲೋಕಕೆ ಬ್ರಹ್ಮವಿದನು ತತ್ಕಾಲದಲಿ
ಪರಿಹರಿಸಿ ತನುಪೋಗಿ ಅವರಿಂದಲಿ

ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ೨೫

ಶುಕ್ಲಕೃಷ್ಣೇ ಗತೀಹ್ಯೇತೇ ಜಗತಶ್ಶಾಶ್ವತೇಮತೇ
ಏಕಯಾ ಯಾತ್ಯನಾವೃತ್ತಿ ಮನ್ಯಯಾಽಽವರ್ತತೇ ಪುನಃ ೨೬

ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ
ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ೨೭

---

ಪರಮ ಮಾನಿತರಾಗಿ ಪರಮಾತ್ಮನೈದುವರು
ತಿರುಗರೆಂದಿಗು ಜನಿಸರೀ ಲೋಕದಿ
ಇದಕರ್ಚಿರಾದಿಪಥವೆಂಬುವರು ಇದು ಹೊರತು
ಮುದದಿ ಧೂಮಾದಿ ಮಾರ್ಗವನಾಲಿಸು
ಹೊಗೆಯು ರಾತ್ರಿಯು ಕೃಷ್ಣಪಕ್ಷ ಷಣ್ಮಾಸಂಗ
ಳಿದೆ ದಕ್ಷಿಣಾಯನಕೆ ಮಾನಿಯಾದ
ಸುರರ ಲೋಕಕೆ ಪೋಗಿ ಅಲ್ಲಿಂದ ಯೋಗಿಯು
ಮರಳಿ ಸೋಮನ ಲೋಕಕೈದಿ ಅಲ್ಲಿ
ಚಿರಕಾಲ ಸುಖವ ಭೋಗಿಸುತಿರ್ದು ಅಲ್ಲಿಂದ
ಮರಳಿ ಜನಿಸುವನು ಭೂಲೋಕದೊಳಗೆ
ಈ ಪರಿಯ ಶುಕ್ಲ ಕೃಷ್ಣಾಭಿಧಾನದ ಪಥವು
ಈ ಜಗದಿ ಕೇಳ್ಪ್ರವಾಹದ ರೂಪದಿ
ನಿತ್ಯವಾಗಿಹುದೊಂದು ಮಾರ್ಗದಲಿ ಪೋಗುವಾ
ಮರ್ತ್ಯರೆಂದಿಗು ತಿರುಗರನ್ಯ ಪಥದಿ
ಧರೆಯೊಳಗೆ ಮರಳಿ ಜನಿಸುವರೆಂಬುದಿದು ಮತಪ್ರೊ
ಕುರು ನಂದನನೆ ಕೇಳು ಈ ವಿಧವಲಿ
ಅರಿತುಪಾಯುವನೆ ಒಬ್ಬಾನೊಬ್ಬ ಯೋಗಿಯು
ಮರಳಿ ಮೋಹವನೈದ ನದುಕಾರಣ
ಎಲ್ಲ ಕಾಲದಿ ಯೋಗಯುಕ್ತನಾಗೈ - ಪಾರ್ಥ
ಸಲ್ಲಲಿತ ಸತ್ಸುಖವ ಪಡೆವೆಯೆಂದಾ ೨೪-೨೭

ವೇದೇಷು ಯಜ್ಞೇಷು ತಪಃಸುಚೈವ
ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್
ಅತ್ಯೇತಿ ತತ್ಸರ್ವಮಿದಂ ವಿದಿತ್ವಾ
ಯೋಗೀ ಪರಂಸ್ಥಾನ ಮುಪೈತಿ ಚಾದ್ಯಮ್ ೨೮

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಅಕ್ಷರಬ್ರಹ್ಮಯೋಗೋ**ನಾಮ
ಅಷ್ಟಮೋಽಧ್ಯಾಯಃ

---

ಷಟ್ಪದೀ ತ್ರಿಪುಟತಾಳ

ಸರ್ವ ವೇದವ ಪಠನ ಮಾಡಲು
ಸರ್ವ ಯಜ್ಞಗಳಾಚರಿಸುತಿರೆ
ಸರ್ವ ದಾನಗಳಿಂದ ತಪದಿಂದೆಷ್ಟು ಫಲವಹುದೋ
ಗರ್ವವಳಿದಿದನರಿತವನು ತ
ತ್ಸರ್ವ ಫಲಕಿಂತಧಿಕವಾಗಿಹ
ಸರ್ವ ಕಾಷ್ಠನ ಪರಮಸ್ಥಾನವ ನೈದುತಿಹನೆಂದಾ ೨೮

ಆರ್ಯಾ:—

ಇಂದಿರೇಶ ವಿಠಲನು ಈ ಪರಿಯಲಿ
ಇಂದು ಪಾರ್ಥಗುಪದೇಶವನು
ಚಂದದಿ ಮಾಡಿದ ಧೃತರಾಷ್ಟ್ರನೆ ಕೇ
ಳೆಂದು ನುಡಿದ ಸಂಜಯನಿದನು

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ "**ಗೀತಾರಂಜನಾ**"ಖ್ಯ ಗ್ರಂಥೇ
**ಅಕ್ಷರಬ್ರಹ್ಮಯೋಗೋ**ನಾಮ
ಅಷ್ಟಮೋಽಧ್ಯಾಯಃ



ಹರಿಃ ಓಂ

# ಒಂಬತ್ತನೆಯ ಅಧ್ಯಾಯ

ಶ್ರೀ ಭಗವಾನುವಾಚ:—

ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ
ಜ್ಞಾನಂ ವಿಜ್ಞಾನ ಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ೧
ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದ ಮುತ್ತಮಂ
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಂ ೨

---

ಷಟ್ಪದೀ ರೂಪಕತಾಳ

ಆವುದರಿವುದರಿಂದ ಭವದುಃ
ಖಾವಳಿಯ ಬಂಧನದಿ ಜನಿಸುವ
ನೋವಿನಿಂ ಬಿಡುಗಡೆಯನೈದುವ ಗೋಪ್ಯವಾಗಿರ್ಪ
ಈ ವಿಮಲ ವಿಜ್ಞಾನ ಸಹಿತದ
ಪಾವನದ *ಸುಜ್ಞೇಯವುಸುರುವೆ
ಭಾವಿಸಲು ನಿರಸೂಯುಯುತ ನೀನಾದ ಕಾರಣದಿ ೧

ಪದ ಅಟತಾಳ

ಪರಮ ಪಾವನ ಉತ್ತಮೋತ್ತಮ ಧರೆಯೊಳು,
ಚರಿಸಲು ಸುಖಸಾಧ್ಯವಾದಾ
ವರ ವಿದ್ಯಾವ್ಯಯ ರಾಜಗುಹ್ಯ ಧರ್ಮವು ಇದು
ಹರಿ ದರ್ಶನಕೆ ಹೇತುವಾದಾ ೧

ಈಪರಿಯಹ ಧರ್ಮಜ್ಞಾನದಿ ಶ್ರದ್ಧೆಯಿಲ್ಲದ
ಕಾಪುರುಷನು ಐದನೆನ್ನ
ತಾಪತ್ರಯದ ಮೃತ್ಯು ಸಂಸಾರ ಪಥದಿ ನಾ
ನಾ ಪರಿಭ್ರಮಿಪ ಕೇಳಿನ್ನು ೨

*ಜ್ಞಾತವ್ಯವಾದ ಪ್ರಮೇಯವನ್ನು

ಅಶ್ರದ್ಧಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯು ಸಂಸಾರವರ್ತ್ಮನಿ ೩
ಮಯಾ ತತಮಿದಂ ಸರ್ವಂ ಜಗದವ್ಯಕ್ತ ಮೂರ್ತಿನಾ
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ೪
ನ ಚ ಮತ್ಸ್ಥಾನಿ ಭೂತಾನಿ ಪಶ್ಯಮೇ ಯೋಗಮೈಶ್ವರಮ್
ಭೂತಭೃನ್ನಚ ಭೂತಸ್ಥೋ ಮಮಾತ್ಮಾ ಭೂತಭಾವನಃ ೫
ಯಥಾಽಽಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರ ಗೋಮಹಾನ್
ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ೬

---

ಎಲೆ ಪಾರ್ಥ ಅವ್ಯಕ್ತರೂಪಿಯಾಗಿಹ ಎನ್ನಿಂ
ದಲಿ ವ್ಯಾಪ್ತವೀ ಜಗವೆಲ್ಲ
ತಿಳಿ ಸರ್ವ ಪ್ರಾಣಿಗಳಿರುವ ವಾಶ್ರಯಿಸಿ ಎ
ನ್ನೊಳು ನಾನಂತವರೊಳಗಿಲ್ಲ ೩

ಎಲ್ಲ ಪ್ರಾಣಿಗಳೆನ್ನೊಳಿದ್ದಾರಾದರು ಸ್ಪರ್ಶ
ವಿಲ್ಲದರಿಂದ ಎನ್ನೊಳಗೆ
ಇಲ್ಲ ಪ್ರಾಣಿಗಳೆನ್ನ ಯೋಗೈಶ್ವರ್ಯವ ನೋಡು
ಎಲ್ಲ ಪ್ರಾಣಿಗಳು ತಮ್ಮೊಳಗೆ ೪

ಧರಿಸಿಪ್ಪರೆನ್ನ ನಿರ್ಲಿಪ್ತನಾಗವರೊಳ
ಗಿರುವ ಕಾರಣದಿಂದ ಅವರೊ
ಳಿರುವವ ನಾನಲ್ಲವೆಂದೆನಿಪೆ ಎನ್ನಯ
ಇರವ ಪ್ರಾಣಿಗಳು ಭಾವಿಪರೊ ೫

ನಿರುತ ಸರ್ವತ್ರ ಸಂಚರಿಸುವ ಗಾಳಿಯು
ಸ್ಪರ್ಶವಿಲ್ಲದೆ ಆಕಾಶದಲಿ
ಇರುತಿಹುದ್ಯಾವ್ಯಂಗೊ ಆ ವಿಧದಿ ಪ್ರಾಣಿಗಳೆಲ್ಲ
ಇರುವರೊ ಎನ್ನ ದೇಹದಲಿ ೬

ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್
ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ೭

ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ
ಭೂತಗ್ರಾಮ ಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ೮

ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ
ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ೯

---

ಈ ಪರಿ ತಿಳಿ ಪಾರ್ಥ ಸರ್ವ ಪ್ರಾಣಿಗಳು ಮ
ಹಾ ಪ್ರಳಯದಿ ಎನ್ನಾಧೀನಾ
ದೀ ಪ್ರಕೃತಿಯನ್ನೈದಿ ಕಲ್ಪಾದಿಯಲಿ ಪುನ
ಹಾ ಪ್ರಾಣಿಗಳನೆ ಸೃಜಿಸುವೆನಾ ೭

ಎನ್ನಾಧೀನದ ಜಡ ಪ್ರಕೃತಿಯ ಕಾರಣ
ವನ್ನೆ ಮಾಡುತ ನಾನಿರುತ
ಘನ್ನ ಪ್ರಕೃತಿಯ ವಶವಾದ್ದರಿಂ ಸ್ವಾತಂತ್ರ್ಯ
ವನ್ನು ಕಾಣದೆ ಪರಿತಪಿಪ ೮

ಜೀವವೃಂದವನೆಲ್ಲ ಮರಳಿ ಮರಳಿ ನಾ
ನೀ ವಿಧದಲಿ ಸೃಷ್ಟಿಸುವೆನು
ಜೀವನಂತೆನಗೆ ಬಂಧನವಿಲ್ಲ ಕೇಳೆಂದಿರೇ
ಶ ವಿಠ್ಠಲನಾ ತಿಳಿಯೈ ೯

೭-೯

ಷಟ್ಪದೀ ರೂಪಕತಾಳ

ಇನಿತು ವಿಶ್ವ ಸ್ಥಿತಿ ಪ್ರಳಯ ಸರ್ಗವ ಮಾಳ್ಪ
ಎನಗೆ ಆ ಕರ್ಮಗಳು ಬಂಧಿಸವು ಅದರೊಳಾ
ಸನುಗಾಲಸಕ್ತನಾಗದೆ ಉದಾಸೀನವತು ಇರುವ ಕಾರಣ
[ದಿಂವಲೀ

ಮಯಾಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್
ಹೇತುನಾಽನೇನ ಕೌಂತೇಯ ಜಗದ್ವಿಪರಿವರ್ತತೇ ೧೦

ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್
ಪರಂ ಭಾವಮಜಾನಂತೋ ಮಮಭೂತ ಮಹೇಶ್ವರಮ್ ೧೧

ಮೋಘಾಶಾ ಮೋಘ ಕರ್ಮಾಣೋ ಮೋಘಜ್ಞಾನಾ ವಿಚೇತಸಃ
ರಾಕ್ಷಸೀ ಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ೧೨

---

ಘನ ಅಧಿಪನಾದೆನ್ನ ಪ್ರೇರಣದಿ ಕೇಳು ಚೇ
ತನ ಪ್ರಕೃತಿಯೆಂಬ ಲಕ್ಷ್ಮಿಯು ಚರಾಚರ ಜಗ
ಜ್ಜನಸಿಯಾಹಳು ಪಡೆವಳೆಲ್ಲ ಈ ಕಾರಣದಿ ಪರಿನರ್ತಿ‍ಪುದು
[ ವಿಶ್ವವು ೯-೧೦

ಎನ್ನ ಸರ್ವೋತ್ತಮೋತ್ತಮ ಪ್ರಾಣಿಗಳಿಗೊಡೆಯ
ಪನ್ನತಾನಂತ ಮಹಿಮನ ಭಾವವರಿಯದೆ
ಇನ್ನು ಮಾನುಷ ಸದೃಶ ದೇಹವಾಶ್ರೈಸಿದವ ನೆಂದರಿವರತಿ
[ಮೂಢರು

ಎನ್ನ ಈ ವಿಧದಿ ಅವಮಾನ ಮಾಡುವರು ಕೇ
ಳಿನ್ನು ಅಸುರ ರಾಕ್ಷಸಾದಿ ಸ್ವಭಾವ ಸಂ
ಪನ್ನರೀ ತೆರದ ಮೋಹವನೆ ಆಶ್ರೈಸಿದೀವಿಧರು ಕೆಡುತಿಹ
[ರೆಂದನು

ಇವರಿಂದ ಕೃತ ಮೋಕ್ಷದಾಸೆ ವ್ಯರ್ಥವು ಕೇಳು
ಇವರಿಂದ ಕೃತಯಜ್ಞ ಮೊದಲಾದ ಸತ್ಕರ್ಮ
ಭವಕೆ ಕಾರಣವಾಗಿ ಕೆಡಿಸುವುದು ಅದು ನಿಮಿತ್ತದಿ ವ್ಯರ್ಥ
[ಸತ್ಕರ್ಮವು

ಇವರರಿವ ವೇದಾರ್ಥಜ್ಞಾನ ಮಿಥ್ಯಾಜ್ಞಾನ
ಇವರಿಗಂಧಂತಮಃ ಪ್ರದವಾಗಿ ದುಃಖ ಕೆಳೆ
ಸುವುದಾದ ಕಾರಣದಿ ಈ ವಿಧರು ಕುಮತಿಗಳು ಅರಿವ
[ಜ್ಞಾನವು ವ್ಯರ್ಥವು ೧೧-೧

ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ
ಭಜಂತ್ಯನನ್ಯ ಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ೧೩
ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ೧೪
ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ
ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋ ಮುಖಮ್ ೧೫

---

ಷಟ್ಪದೀ ತ್ರಿಪುಟತಾಳ

ದೇವತಾ ಸಂಬಂಧಿಯಾಗಿಹ
ಈ ವಿಮಲ ಯೋಗ್ಯತೆಯ ಹೊಂದಿದ
ಭಾವಶುದ್ಧ ಮಹಾತ್ಮ ಭಕ್ತರನನ್ಯ ಮತಿಯಿಂದ
ದೇವದೇವೋತ್ತಮನು ಕೆಡದವ
ಜೀವಿಗಳಿಗೆ ಅನಾದಿ ಕಾರಣ
ಪಾವನನುಪಮ ನೆಂದರಿದು ಭಜಿಸುವರು ಕೇಳೆನ್ನ ೧೩

ನಿರುತ ಸುದೃಢವ್ರತರು ಎನ್ನಯ
ಪರ ಮಹಾತ್ಮೆಯ ಕೀರ್ತಿಸುತ ತರ
ತರದಿ ಯತ್ನವ ಮಾಡುವರು ಮತ್ಸೇವೆ ಗೋಸುಗದಿ
ಪರಮ ಸದ್ಭಕ್ತಿಯಲಿ ನಮಿಸುವ
ರರಿಯೊ ಈ ಪರಿ ಭಕ್ತಿಯುಕ್ತರು
ನಿರುತ ಎನ್ನ ಉಪಾಸನೆಯ ಮಾಡುವರು ಕೇಳೆಂದ ೧೪

ಕೆಲವರೆನ್ನನು ಸರ್ವ ಪ್ರಾಣಿಗ
ಳೊಳಗೆ ಸ್ಥಿತನಿವನೊಬ್ಬನೆನುತಲಿ
ಕೆಲರು ಸಚರಾಚರ ಜಗಕೆ ಬೇರಾಗಿರುವನೆಂದು
ಕೆಲವರೆನ್ನನು ವಿಶ್ವತೋಮುಖ
ಹಲವು ವಿಧನೆಂದರಿತು ನಿತ್ಯದಿ
ಕೆಲವರೆನ್ನನು ಜ್ಞಾನಯಜ್ಞದಿ ಯಜಿಸಿ ಪೂಜಿಪರು ೧೫

❀

ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹ ಮೌಷಧಮ್
ಮಂತ್ರೋಽಹ ಮಹಮೇ ವಾಜ್ಯ ಮಹಮಗ್ನಿರಹಂ ಹುತಮ್ ೧೬

ಪಿತಾಽಹಮಸ್ಯ ಜಗತೋ ಮಾತಾಧಾತಾ ಪಿತಾಮಹಃ
ವೇದ್ಯಂ ಪವಿತ್ರ ಮೋಂಕಾರ ಋಕ್ಸಾಮ ಯಜುರೇವ ಚ ೧೭

ಗತಿರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಶ್ಶರಣಂ ಸುಹೃತ್
ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ೧೮

---

ನಾನೆ ಕ್ರತು ಯಜ್ಞಾಭಿದನು ಕೇ
ನಾನೆ ಸ್ವಾಹೌಷಟು ಸ್ವಧಾಖ್ಯನು
ನಾನೆ ಕೇಳು ಮಹೌಷಧಿಯು ನಾನೇ ಸಮಂತ್ರಗಳು
ನಾನೆ ಆಜ್ಯಜ್ವಲನನೆಂಬಭಿ
ಧಾನದಿಂದಲಿ ಕರೆಸುತೆಲ್ಲರೂ
ನಾನೆ ಇರುವೆನೊ ತನ್ನಿಯಾಮಕನಾಗಿ ತಿಳಿಯೆಂದ ೧೬

ನಾನೆ ಈ ಜಗಕೆಲ್ಲ ಜನನಿಯು
ನಾನೆ ತಂದೆ ಪಿತಾಮಹನು ಕೇ
ನಾನೆ ಧಾರಣ ಪೋಷಣಾದಿಗಳೆಲ್ಲ ಮಾಡುವನು
ನಾನೆ ವೇದ್ಯ ಪವಿತ್ರ ನನುಪಮ
ನಾನೆ ಯುಜುರುಕ್ ಸಾಮವೇದದಿ
ನಾನೆ ಓಂಕಾರದಿ ವಿಶೇಷದಿ ಸನ್ನಿಹಿತನೆಂದ ೧೭

ನಾನೆ ಪುರುಷಾರ್ಥ ಸ್ವರೂಪನು
ನಾನೆ ಪ್ರಭು ಸಂರಕ್ಷಕನು ಕೇ
ನಾನೆ ಸಾಕ್ಷಿ ಶರಣ್ಯ ಸುಹೃದನಿವಾಸ ನೀ ಜಗಕೆ
ನಾನೆ ಪ್ರಭವ ಪ್ರಳಯಕರ್ತನು
ನಾನೆ ಸ್ಥಾನ ನಿಧಾನ ಬೀಜನು
ನಾನೆ ಅವ್ಯಯ ತನ್ನಿಯಾಮಕನಾಗಿರುವೆನೆಂದಾ ೧೮

ತಪಾಮ್ಯಹ ಮಹಂ ವರ್ಷಂ ನಿಗೃಹ್ಣಾ ಮ್ಯುತ್ಸೃಜಾಮಿ ಚ
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹ ಮರ್ಜುನ ೧೯

ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪ
ಯಜ್ಞೈ ರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ
ತೇ ಪುಣ್ಯ ಮಾಸಾದ್ಯ ಸುರೇಂದ್ರ ಲೋಕ
ಮಶ್ನಂತಿ ದಿವ್ಯಾನ್ದಿವಿ ದೇವ ಭೋಗಾನ್ ೨೦

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ
ಏವಂ ತ್ರಯೀಧರ್ಮ ಮನು ಪ್ರಪನ್ನಾ
ಗತಾಗತಂ ಕಾಮಕಾಮಾ ಲಭಂತೇ ೨೧

---

ರವಿಯೊಳಗೆ ನಾನಿದ್ದು ತಪಿಸುವೆ
ಅವನಿಯೊಳು ಮಳೆಗರೆವೆ ಕಿರಣದಿ
ಭುವನದೊಳಗುಳ್ಳಮಿತಜಲ ಗ್ರಹಿಸುವೆನು ಬಿಡುತಿಹೆನು
ಭುವನಕಮೃತನು, ಮೃತ್ಯುವೆಂದೆನಿ
ಸುವೆನು ವ್ಯಕ್ತಾವ್ಯಕ್ತನಾಗಿಹ
ನೆವನದಿಂ ಸದಸತ್ತು ನಾನೆಂದೆನಿಸಿ ಕೊಳುತಿಹೆನು ೧೯

ಧರೆಯೊಳಗೆ ತ್ರೈವಿದ್ಯರೆನ್ನನು
ಪರಮ ಯಜ್ಞಗಳಿಂದ ಯಜಿಸುತ
ವರ ಸುಸೋಮದ ಪಾನದಿಂ ನಿಷ್ಪಾಪರಾದವರು
ಸುರರ ಲೋಕವ ಬಯಸಿ ಪ್ರಾರ್ಥಿಪ
ನರರು ಪುಣ್ಯವಿಶೇಷದಿಂ ನಿ
ರ್ಜರರ ಲೋಕವನೈದಿ ದಿವಿಯಲಿ ದೇವ ಭೋಗಗಳಾ ೨೦

ಅನುಭವಿಪರೈ ಕೇಳು ಅವರೀ
ಘನ ಸುಸ್ವರ್ಗದ ಫಲವ ಭೋಗಿಸಿ,
ದಿನದಿನಕೆ ಕ್ಷೀಣಿಸಲು ಪುಣ್ಯವು ಮರ್ತ್ಯಲೋಕದಲಿ

ಅನನ್ಯಾಶ್ಚಿಂತಯಂತೋಃಮಾಂ ಯೇಜನಾಃ ಪರ್ಯುಪಾಸತೇ
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ೨೨

ಯೇಃಪ್ಯನ್ಯ ದೇವತಾ ಭಕ್ತಾಯಜಂತೇ ಶ್ರದ್ಧಯಾಽನ್ವಿತಾಃ
ತೇಃಪಿ ಮಾಮೇವ ಕೌಂತೇಯ ಯಜಂತ್ಯವಿಧಿ ಪೂರ್ವಕಮ್ ೨೩

ಅಹಂ ಹಿ ಸರ್ವ ಯಜ್ಞಾನಾಂ ಭೋಃಕ್ತಾಚ ಪ್ರಭುರೇವಚ
ನ ತುಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ೨೪

---

ಅನುಪ್ರವೇಶವ ಮಾಡುವರು ಕೇ
ಳಿನಿತು ತ್ರೈವಿದ್ಯರು ಸಕಾಮಿಗ
ಳನುಸರಿಪ ಧರ್ಮಕೆ ಗತಾಗತ ಫಲವನೈದುವರು ೨೧

ಮನದಿ ಅನ್ಯವನೊಂದ ಬಯಸದೆ
ಘನ ಭಕುತಿಯಿಂದೆನ್ನ ಭಜಿಸುತ
ಅನವರತ ಮದ್ಧ್ಯಾನಯುಕ್ತರು ಯಾರೊ ಆ ನರರಾ
ಅನುದಿನದಿ ಬಹ ಭಾವ್ಯ ದುಃಖವ
ಹಣಿದು ನಾನತಿ ಕರುಣದಿಂವಲಿ
ಘನ ಸುಯೋಗಕ್ಷೇಮ ವಹಿಸುವೆನೆಂದ ನಸುರಾರಿ ೨೨

ಆರ್ಯ:—

ಎನ್ನನು ಸರ್ವತ್ರದಿ ಭಾವಿಸದೆ, ಅನ್ಯಸುರರ ಭಕ್ತರು ಇಹದೀ
ಘನ್ನ ಭಕ್ತಿಯಿಂದ್ಯಜಿಪರಾರೊ ಅವರೆನ್ನನೆ ಯಜಿಪರು ಅವಿಹಿತದಿ ೧

ವಿಧಿ ಪೂರ್ವಕ ಯಜಿಸದ ಕಾರಣ ಈ ವಿಧರ್ಯಜ್ಞದಿ ಕೊಟ್ಟಾಹುತಿಯಾ
ವಿಧಿ ಭವಾದಿಗಳು ಸ್ವೀಕರಿಸರು ಕೇಳಿದನೆ ಗ್ರಹಿಪ ದೈತ್ಯರ ಪರಿಯಾ ೨

ದೀನ ನಾಮಕರು ಬ್ರಹ್ಮಭವಾದ್ಯಭಿಧಾನದಿಂದ ಕರೆಸುತಲವರು
ಹೀನ ಸ್ವಭಾವರು ಮಾಡುವ ಮಿಥ್ಯಾಜ್ಞಾನಿಗಳ್ಯಜ್ಞವ ಭುಂಜಿಪರು ೩

ಯಾಂತಿ ದೇವವ್ರತಾ ದೇವಾನ್ ಪಿತ್ರ್ಯಾನ್ ಯಾಂತಿ ಪಿತೃವ್ರತಾಃ
ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ
[ ಮಾಮ್ ೨೫

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ
ತದಹಂ ಭಕ್ತ್ಯುಪಹೃತ ಮಶ್ನಾಮಿ ಪ್ರಯತಾತ್ಮನಃ ೨೬

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ೨೭

---

ನಾನೆ ಸರ್ವ ಯಜ್ಞಾನಿ ಭೋಕ್ತ ಕೇಳಾನೆ ಸರ್ವ ಕೊಡೆಯನೊ ಎನ್ನ
ದಾನವ ಸಂಬಂಧಿಗಳರಿಯರು *ತತ್ವೇನ ಕಡೆಗೆ ಬಡುವರು ಬನ್ನಾ ೪

ದೇವವ್ರತರಾದವರೈದುವರಾ - ದೇವತೆಗಳ ಲೋಕವ ಪಿತ್ರ್ಯ -
ದೇವತೆಗಳ ವ್ರತನಿಷ್ಠರು ತತ್ಪಿತೃ ದೇವತೆಗಳನೈದುತಲಿಹರೂ ೫

ಎನ್ನವರಲಿ ಭಾವಿಸುತಲಿ ನಿರ್ಜರರನ್ನೆ ಭಜಿಸಿ ದಾಗ್ಯಾರವರು
ಎನ್ನನೆ ಪೂಜಿಸಿದವರೆಂದರಿ ಅವರೆನ್ನ ಲೋಕವ್ವೈದುತಲಿಹರೂ ೬

ಆವನೆನಗೆ ಭಕ್ತಿಯ ಭರದಿಂದತಿ ಪಾವನ ಸುಮಫಲ ಪತ್ರವನು
ಈವನೊ ಜಲವಾದರು ನಾನದ ಸದ್ಭಾವದಿಂದ ಯದಿ ಗ್ರಹಿಸುವೆನು ೭

ಸ್ವೀಕರಿಸೀಪರಿ ಪ್ರೀತನಾಗಿ ನಿರಾಕರಿಸದೆ ಭುಂಜಿಸುತಿಹೆನೋ
ಪ್ರಾಕೃತ ರಸದಿಂದುಪಚಯ ಅಪಚಯ ಲೋಕರಂತೆ ಐದದೆ ಇಹೆನೊ ೮

ಏನು ಮಾಡುವೆಯೊ ಏನು ಭುಂಜಿಸುವ್ಯೊ ಏನು ಯಜಿಸುವೆಯೊ ಕೇಳಿನ್ನೂ
ಏನು ದಾನ ಮಾಡುವೆಯೊ ಕಾಣುವೀ ಏನು ಅವೆಲ್ಲವ ಎನಗಿನ್ನೂ ೯

ಶ್ರದ್ಧೆಯಿಂದ ಅರ್ಪಿಸು ಈ ವಿಧ ಪರಿಶುದ್ಧ ಕರ್ಮ ಸನ್ಯಾಸದಲಿ
ಬುದ್ಧಿಯೋಗ ಯುಕ್ತಾತ್ಮನಾವರೆ ಬದ್ಧನಾಗೆ ದುರ್ವಿಷಯದಲಿ ೧೦

*ನಿಜವಾದ ರೂಪವನ್ನು ಅರಿಯದೆ

ಶುಭಾಶುಭ ಫಲೈರೇವಂ ಮೋಕ್ಷಸೇ ಕರ್ಮಬಂಧನೈಃ
ಸನ್ಯಾಸ ಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ೨೮

ಸಮೋಽಹಂ ಸರ್ವ ಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ೨೯

ಅಪಿ ಚೇತ್ಸು ದುರಾಚಾರೋ ಭಜತೇ ಮಾಮನನ್ಯ ಭಾಕ್
ಸಾಧುರೇವ ಸಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ೩೦

ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿ ನಿಗಚ್ಛತಿ
ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ೩೧

---

ಎಲೆ ಧನಂಜಯನೆ ಕೇಳು ಶುಭಾಶುಭ ಫಲದಿ ಮುಕ್ತನಾಗೀ ವಿಧದಿ
ಫಲದ ಕರ್ಮ ಬಂಧನದಿಂ ಬಿಡುಗಡೆ ಗಳಿಸಿಯುನ್ನ ಪದವನ್ನೈದಿ ೧೨

ಎನಗೆ ಬಾಧಕರು ದ್ವೇಷಿಗಳಿಲ್ಲವೊ ಎನಗೆ ಸಾಧಕ ಪ್ರಿಯರಿಲ್ಲ
ಇನಿತು ಸರ್ವ ಪ್ರಾಣಿಗಳೊಳು ಸಮನಾನನುಪಮನೈ ಕೇಳೀಸೊಲ್ಲ ೧೩

ಆವ ಪುರುಷರೆನ್ನನುದಿನ ಭಕ್ತಿಯ ಭಾವದಿಂದ ಪೂಜಿಸುತಿಹರೊ
ನಾ ವರನವರಿಗೆ ಅವರೆನ್ನೊಳ ಕೇಳೀವಿಧ ಅವರೆಂದಿಗು ಕೆಡರೊ ೧೪

ಎನ್ನನು ಸುದುರಾಚಾರಿಯಾದರಃನನ್ಯ ಮನದಿ ಭಜಿಸುತಲಿಹನೊ
ಧನ್ಯ ಸಾಧು ಯೆಂದರಿಯಲರ್ಹ ಕೇಳಿನ್ನುತ್ತಮ ನಿಶ್ಚಯದವನು ೧೫

ತ್ವರದಿ ನಿಂದ್ಯ ಕಾರ್ಯಗಳಳಿದವನೀವರ ಸುಧರ್ಮ ಕರ್ಮಗಳಲ್ಲಿ
ನಿರತನಾಗಿ ಸದ್ಗತಿಯೈದುವನೀಪರಿ ಮದ್ಭಕ್ತನು ಕೆಡನೆಲ್ಲಿ ೧೬

(೨೩ ೩೧)

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ
ಸ್ತ್ರಿಯೋ ವೈಶ್ಯಾಸ್ತಥಾಶೂದ್ರಾ ಸ್ತೇಽಪಿ ಯಾಂತಿ ಪರಾಂಗತಿಂ ೩೨

ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ
ಅನಿತ್ಯ ಮಸುಖಂ ಲೋಕ ಮಿಮಂ ಪ್ರಾಪ್ಯ ಭಜಸ್ವಮಾಂ ೩೩

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು
ಮಾಮೇವೈಷ್ಯಸಿ ಯುಕ್ತ್ವೈವ ಮಾತ್ಮಾನಂ ಮತ್ಪರಾಯಣಃ ೩೪

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ರಾಜವಿದ್ಯಾರಾಜಗುಹ್ಯಯೋಗೋ**ನಾಮ
ನವಮೋಧ್ಯಾಯಃ

---

ಷಟ್ಪದೀ ತ್ರಿಪುಟತಾಳ

ಎಲೆ ಧನಂಜಯ ಪಾಪಯೋನಿಗ
ಳಲಿ ಜನಿಸಿದವರಾದಡಾಗಲಿ
ಇಳೆಯೊಳಗೆ ನಾರಿಯರು ವೈಶ್ಯರು ಶೂದ್ರ ಮೊದಲಾದ
ಹಲವು ಜನರೆನ್ನಾಶ್ರಯದಿ ನಿ
ಶ್ಚಲ ಮನದಿ ಸ್ಮರಿಸುವರು ಅತಿ ನಿ
ರ್ಮಲ ಸುಮೋಕ್ಷವನೈದುವರು ಕೇಳೆಂದನಸುರಾರಿ ೩೨

ಕುಲದೊಳುತ್ತಮ ಪುಣ್ಯಯೋನಿ ಜ
ಮಲರಹಿತ ಬ್ರಾಹ್ಮಣರು ಹಾಗೇ
ಇಳೆಯೊಳಗೆ ರಾಜರ್ಷಿಗಳು ಮದ್ಭಕ್ತರಾದವರು
ಚಲನವಿಲ್ಲದ ಸುಖಪಡುವರೆಂ
ದ್ಹಲವು ಮಾತೇನ್ಹೇಳಲ್ಯೆ ಈ
ಚಲಿಪ ಅಸುಖದ ದೆಸೆಕಡಿದು ಪಡೆದೆನ್ನ ಭಜಿಸೆಂದಾ ೩೩

ಮನವ ಎನ್ನಲಿ ನೆಲೆಗೊಳಿಸು ನೀ
ನನುದಿನದಿ ಮದ್ಭಕ್ತನಾಗೈ
ಘನಸುಯಜ್ಞಗಳೆನ್ನಗೋಸುಗ ಯಜಿಸುತಿರು ಎನ್ನ
ಅನವರತ ನಮಿಸುತ್ತಲಿರೆ ಎ
ನ್ನನುಪಮದ ಪದವೈದುವೆಯೊ ನೀ
ನೆನಗೆ ಪ್ರಿಯನಿದು ನಿಜವೊ ಮಾಡುವೆ ಶಪಥವೆಂತೆಂದ ೩೪

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ **"ಗೀತಾರಂಜನಾ"**ಖ್ಯ ಗ್ರಂಥೇ
**ರಾಜವಿದ್ಯಾರಾಜಗುಹ್ಯಯೋಗೋನಾಮ**
ನವಮೋಽಧ್ಯಾಯಃ



ಹರಿಃ ಓಂ

# ಹತ್ತನೆಯ ಅಧ್ಯಾಯ

---

ಶ್ರೀ ಭಗವಾನುವಾಚ:—

ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ
ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ೧

ನ ಮೇ ವಿದುಸ್ಸುರಗಣಾಃ ಪ್ರಭವಂ ನ ಮಹರ್ಷಯಃ
ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂಚ ಸರ್ವಶಃ ೨

ಯೋಮಾಮಜಮನಾದಿಂಚ ವೇತ್ತಿ ಲೋಕ ಮಹೇಶ್ವರಮ್
ಅಸಮ್ಮೂಢ ಸ್ಸಮರ್ತ್ಯೇಷು ಸರ್ವ ಪಾಪೈಃ ಪ್ರಮುಚ್ಯತೇ ೩

ಬುದ್ಧಿರ್ಜ್ಞಾನ ಮಸಮ್ಮೋಹಃ ಕ್ಷಮಾ ಸತ್ಯಂ ದಮಶ್ಶಮಃ
ಸುಖಂ ದುಃಖಂ ಭವೋಽಭಾವೋ ಭಯಂಚಾ ಭಯಮೇವ ಚ ೪

---

ಆರ್ಯ:—

ಇನ್ನು ಕೇಳು ಪಾಂಡವನೆ ಹೇಳುವಾ ಎನ್ನ ಪರಮ ಸದ್ವಾಕ್ಯವನೂ
ಘನ್ನ ವಾಕ್ಯವಾವುದರಿಂ ನೀ ಪ್ರಿಯವನ್ನೆ ಐದುವೆಯೊ ನಾನದನೂ ೧

ಅತ್ಯುತ್ತಮ ಪ್ರಿಯನಹ ನಿನಗೋಸುಗ ಮತ್ತುಸುರುವೆ ಹಿತವನೆ ಬಯಸೀ
ಚಿತ್ತದೊಳವಧರಿಸೈ ಸುರಗಣಗಳು ಮತ್ಪ್ರಭಾವ ಮೊತ್ತವನೆಣಿಸೀ ೨

ಕೊನೆಗಂಡರಿಯರು ಮಹರ್ಷಿಗಳು ಎನ್ನನುಪಮ ಮಹಿಮೆಯರಿಯರಿವನು
ಅನಘ ಕೇಳೊ ನಿರ್ಜರರಿಗು ಮಹರ್ಷಿ ಗಣಕೆಲ್ಲಾದಿಕರ್ತನು ನಾನು ೩

ಷಟ್ಪದೀ:—

ಆವನೆನ್ನನು ಜನ್ಮವಿಲ್ಲದ
ದೇವದೇವೋತ್ತಮನನಾದಿ ಸ್ವ
ಭಾವಯುತ ನೀ ಲೋಕಕೆಲ್ಲ ಮಹೇಶ್ವರನು ಎಂದು

ಅಹಿಂಸಾ ಸಮತಾ ತುಷ್ಟಿಸ್ತಪೋದಾನಂ ಯಶೋಽಯಶಃ
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ೫
ಮಹರ್ಷಯಸ್ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ
ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ೬
ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ
ಸೋಽವಿಕಂಪೇನ ಯೋಗೇನ ಯುಜ್ಯತೇನಾತ್ರ ಸಂಶಯಃ ೭

---

ಈ ವಿಧವನರಿತವನು ಲೋಕದಿ
ಪಾವನನು ಸುವಿವೇಕಿ ಬಹು ದುರಿ
ತಾವಳಿಗಳಿಂ ಬಿಡುಗಡೆಯನೈದುವನು ಕೇಳೆಂದ ೪

ಪರಮ ಬುದ್ಧಿ ಜ್ಞಾನ ಸತ್ಯವು
ಮರುಳನಳಿದ ವಿವೇಕ ಶಮದಮ
ವರ ಕ್ಷಮಾಸುಖದುಃಖ ಉದ್ಭವ ಉದ್ಭವಾಭಾವ
ಪರಿಪರಿಯ ಭಯ ಅಭಯ ಹಿಂಸೆಯು
ಜರಿದ ಸಮತಾತುಷ್ಟಿ ತಪದಾ
ನುರು ಯಶೋಽಯಶ ಭಾವ ಎನ್ನಿಂದಹುದು ವಿಧವಿಧದಿ ೫

ಮುನ್ನ ಮನದಿಂ ಜಾತರಾಗಿಹ
ಘನ್ನ ಸಪ್ತ ಮಹರ್ಷಿಗಳು ಕೇ
ಳಿನ್ನು ಮನುನಾಮಕರು ಬಹುಜನ ಬ್ರಹ್ಮ ಮೊದಲಾದ
ವರ್ಣ ಭೇದದಿ ನಾಲ್ಕು ವಿಧ ಸುರ
ರೆನ್ನ ಭಾವದಿ ಯುಕ್ತರಿವರಿಂ
ದಿನ್ನು ಲೋಕದ ಪ್ರಜೆಗಳನೆ ಸೃಷ್ಟಿಸುವೆ ನಾನೆಂದ ೬

ಆವ ಮದ್ವಿಭೂತಿ ಯೋಗವ
ಈ ವಿಧದಿ ನಿಶ್ಚಯದಿ ಅರಿತವ
ಪಾವನನು ಚಲಿಸದಲೆ ಯೋಗಾಭ್ಯಾಸದಿಂ ಪೊಂದಿ

ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ೮

ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್
ಕಥಯಂತಶ್ಚಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ೯

ತೇಷಾಂ ಸತತ ಯುಕ್ತಾನಾಂ ಭಜತಾಂ ಪ್ರೀತಿ ಪೂರ್ವಕಮ್
ದದಾಮಿ ಬುದ್ಧಿಯೋಗಂತಂ ಯೇನ ಮಾಮುಪಯಾಂತಿ ತೇ ೧೦

---

ಜೀವಿಸುವನಿದಕಿಲ್ಲ ಸಂಶಯ
ದೇವದೇವೋತ್ತಮನೆನುತ ಎ
ನ್ನೀ ವಿಮಲ ಮಹಿಮೆಯನೆ ಅರಿತವ ಕೆಡನು ಕೇಳೆಂದ ೭

ಸರ್ವ ಜಗದುದ್ಭವಕೆ ನಾನೇ
ಸರ್ವದಾ ಕಾರಣನೆನಿಸುವೆನು
ಸರ್ವ ಸೃಷ್ಟ್ಯಾದ್ಯಷ್ಟ ಕರ್ತೃತ್ವಗಳು ಎನ್ನಿಂದಾ
ಸರ್ವ ಕಾಲದಿ ನಡೆಯುವುದ ಈ
ಉರ್ವಿಯೊಳು ಬುಧರರಿತು ಈ ವಿಧ
ಸರ್ವವಿಧ ಸದ್ಭಾವಯುತರಾಗ್ಯೆನ್ನ ನೈದುವರೊ ೮

**ಸೀಸಮಾಲಿಕಾ—**

ಮಚ್ಚಿತ್ತಮದ್ಗತ ಪ್ರಾಣರಾದವರೆನ್ನ
ಸಚ್ಚರಿತ್ರೆಗಳ ನತಿಭಕ್ತಿಯಿಂದ
ಅನ್ಯೋನ್ಯ ಭೋಧಿಸುತಲಿಹರು ಅರ್ಜುನನೆ ಕೇ
ಳೆನ್ನ ಕಲ್ಯಾಣಪ್ರದ ಗುಣಗಣಗಳಾ
ಕಥನ ಮಾಡುತ ಬಹಳ ಹರುಷ ಪೂ
ರಿತರಾಗಿ ಮಿತಿಮಿರಿ ನಿರುತ ರಮಿಸುತಲಿಪ್ಪರೂ

ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ೧೧

ಅರ್ಜುನ ಉವಾಚ:—

ಪರಂಬ್ರಹ್ಮ ಪರಂಧಾಮ ಪವಿತ್ರಂ ಪರಮಂ ಭವಾನ್
ಪುರುಷಂ ಶಾಶ್ವತಂ ದಿವ್ಯ ಮಾದಿದೇವಮಜಂ ವಿಭುಮ್ ೧೨

ಆಹುಸ್ತ್ವಾಮೃಷಯಸ್ಸರ್ವೇ ದೇವರ್ಷಿರ್ನಾರದಸ್ತಥಾ
ಅಸಿತೋ ದೇವಲೋವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ೧೩

---

ಸತತ ಈ ವಿಧದಿ ಆಸಕ್ತಿಯುಕ್ತರು ಎನ್ನ
ಅತಿ ಪ್ರೀತಿ ಪೂರ್ವಕದಿ ಭಜಿಸುತಿರಲು
ಅವರಾವುದರಿತೆನ್ನ ನೈದುವರೊ ಆ ವಿಧದ
ಧ್ರುವಬುದ್ಧಿ ಯೋಗನಾನವರಿಗೀವೆ
ನಾನನುಗ್ರಹ ಮಾಡಲೋಸುಗದಿ ಅವರ ಅ
ಜ್ಞಾನದಿಂದುದಯಿಸಿದ ಕತ್ತಲೆಯನು
ಅವರಾತ್ಮಭಾವಸ್ಥ ಬಿಂಬಾಪರೋಕ್ಷ ವೆಂ
ಬುವ ಹೊಳೆವ ಜ್ಞಾನದೀಪದಿ ಕೆಡಿಸುವೆ ೯-೧೨

ಪದ ಅಟತಾಳ

ಪರಮ ಪುರುಷ ಪರ ಬೊಮ್ಮ ಪವಿತ್ರ ಪರಂಧಾಮನು ನೀನು ಪ.

ಪರಮ ದಿವ್ಯನಜ ವಿಭು ಶಾಶ್ವತ ಸ
ತ್ಪುರುಷಾನಾದಿ ದೇವರ ದೇವನು ನೀ ಅ

ಅಸಿತ ದೇವಲ ದ್ವೈಪಾಯನ ಸುರರುಷಿ ವರನಾರದ ಹಾಂಗೆ
ಋಷಿಗಳೆಲ್ಲ ನಿನ್ನನು ಹೇಳ್ವರು ನೀನುಸುರುವಿ ಅದರಂತೆನಗೆ ದಯಾಂಬುಧೆ ೧

ಆವುದೆನ್ನನು ಕುರಿತ್ಹೇಳಿದೆಯೋ ಆ ವಿಧವೆಲ್ಲವನು
ಭಾವಿಪೆ ನಿಜವೆನುತಲಿ ತಚ್ಛಕ್ತಿಯ ದೇವತೆಗಳು ದಾನವರರಿಯರೊ ಹರಿ ೨

ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ
ನಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ೧೪

ಸ್ವಯಮೇವಾತ್ಮನಾಽಽತ್ಮಾನಂ ವೇತ್ಥ ತ್ವಂ ಪುರುಷೋತ್ತಮ
ಭೂತಭಾವನ ಭೂತೇಶ ದೇವದೇವ ಜಗತ್ಪತೇ ೧೫

ವಕ್ತುಮರ್ಹಸ್ಯಶೇಷೇಣ ದಿವ್ಯಾಹ್ಯಾತ್ಮವಿಭೂತಯಃ
ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯತಿಷ್ಠಸಿ ೧೬

ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್
ತೇಷು ತೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ೧೭

---

ಭೂತಭಾವನನೆ ದೇವದೇವ ಪುರುಷೋತ್ತಮ ಕೇಳಿದನು
ಭೂತೇಶನೆ ಜಗದೊಡೆಯನೆ ತ್ವನ್ಮಹಿಮಾತಿಶಯವು ನಿನ್ನನು ನೀ ಬಲ್ಲೆಯೊ ೩
ಆವ ವಿಭೂತಿಗಳಿಂದೀ ಲೋಕವ ನೀ ವ್ಯಾಪಿಸಿ ಇರುವ್ಯೋ
ಆ ವಿಧ ದಿವ್ಯಾತ್ಮವಿಭೂತಿಗಳನೆ ನೀ ನೊಲಿದ್ಹೇಳಲು ಅರ್ಹನಶೇಷದಿ ೪
ನಿನ್ನನು ಸದಾ ಚಿಂತಿಸುತಲಿ ನಾಹ್ಯಾಂಗಿನ್ನರಿವೆನೊ ನಿನ್ನಾ
ಎನ್ನಿಂದಲಿ ಆವಾವ ಭಾವದಿಂದಿನ್ನು ಚಿಂತ್ಯನಾಗುವೆಯೊ ರಮಾಪತೆ ೫
ಮರಳಿ ಹೇಳು ವಿಸ್ತರದಿ ನಿನ್ನಯಾ ವರಯೋಗದ ಮಹಿಮಾ
ದುರುಳಮರ್ದನಾ ನಿನ್ನ ವಿಭೂತಿಯ ಪರಿಯು ಕೇಳಲಿಚ್ಛೈಸುವೆ ಕರುಣದಿ ೬
ಇಂದಿರೇಶ ವಿಠಲನೆ ಅಮೃತುಪಮಾ ನಂದವ ತ್ವತ್ಕಥೆಯು
ಚಂದದಿ ಕೇಳುತ ಕೇಳುತ ತೃಪ್ತಿಯು ಹೊಂದದೆನಗೆ ಹೇಳ್ಳೈ ಕೇಳುವೆನೊ ೭
(೧೩-೧೮)

### ಷಟ್ಪದೀ ರೂಪಕತಾಳ

ಕುರುಕುಲೋದ್ಭವನೆ ಮದ್ವಿಭವ-ವಿಸ್ತರ ಕಂತ
ವಿರುವುದಿಲ್ಲದು ನಿಮಿತ್ತದಲಿ ಪ್ರಾಧಾನ್ಯದಿಂ
ದೊರೆವೆ ನಾ ನಿನಗಾತ್ಮವೈಭವದ ದಿವ್ಯ ರೂಪಗಳ ಪರಿಯನೆ
[ಆಲಿಸೈ

ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ
ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ೧೮

ಶ್ರೀ ಭಗವಾನುವಾಚ:—

ಹಂತ ತೇ ಕಥಯಿಷ್ಯಾಮಿ ದಿವ್ಯಾಹ್ಯಾತ್ಮವಿಭೂತಯಃ
ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ೧೯

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ
ಅಹಮಾದಿಶ್ಚ ಮಧ್ಯಂಚ ಭೂತಾನಾಮಂತ ಏವಚ ೨೦

ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ೨೧

---

ಪರಮಾತ್ಮ ನಾನು ಸರ್ವ ಪ್ರಾಣಿಗಳ ಹೃದಯ
ಸರಸಿಜದೊಳಿಪ್ಪೆ ನಾನನವರತ ಪ್ರಾಣಿಗಳ
ಧರೆಯೊಳಗೆ ಸೃಜಿಪೆ ಸಾಕುವೆ ಕೊಲುವೆ ನದರಿಂದ ಆದ್ಯಂತ
[ ಮಧ್ಯ ನಾನೂ (೧೯-೨೦)

ಷಟ್ಪದಿ:—

ದ್ವಾದಶಾದಿತ್ಯರೊಳು ವಿಷ್ಣು ನಾಮಕ ನಾನು,
ನಾದಿವಾರಕನು ಜ್ಯೋತಿರ್ಗಣಂಗಳೊಳು, ಕೇ
ಳಾಮರುದ್ಗಣದೊಳಗೆ ನಾ ಮರೀಚಿಯು, ತಾರ
ಕಾಮಂಡಲದಿ ಚಂದ್ರನಲಿ ನಾನ್ಯೈ, ಪಾರ್ಥ
ವೇದಂಗಳೊಳು ಸಾಮವೇದದಲ್ಲಿಹೆ ನಾನು,
ಆದಿವೌಕಸರೊಳಗೆ ಇಂದ್ರನಲಿ ನಾನಿಪ್ಪೆ,
ಕರಣಗಳ ಮೊತ್ತದಲಿ ಮನವು ನಾನ್ಯೈ ಕೇಳು,
ಕುರುಕುಲೋತ್ತಮನೆ ಪ್ರಾಣಿಗಳೊಳು ಚೇತನನೂ,
ಅರಿ ಭಯಂಕರ ರುದ್ರರೊಳಗೆ ಶಂಕರ ನಾನು,

ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ
ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ೨೨

ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷ ರಕ್ಷಸಾಂ
ವಸೂನಾಂ ಪಾವಕಶ್ಚಾಸ್ಮಿ ಮೇರುಶ್ಶಿಖರಿಣಾಮಹಂ ೨೩

ಪುರೋಧಸಾಂಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಂ
ಸೇನಾನೀನಾಮಹಂ ಸ್ಕಂಧಃ ಸರಸಾಮಸ್ಮಿ ಸಾಗರಃ ೨೪

ಮಹರ್ಷೀಣಾಂ ಭೃಗುರಹಂ *ಗಿರಾಮಸ್ಮ್ಯೇಕ ಮಕ್ಷರಂ
ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ೨೫

---

ಧನಪನಾ ಯಕ್ಷರಾಕ್ಷಸರೊಳಗೆ, ಅಷ್ಟವಸು
ಗಣದೊಳಗೆ ನಾನು ಪಾವಕನು, ಕೇಳಿಲ್ಲ ಪ
ರ್ವತಗಳೊಳು ಮೇರುನಗದಲಿ ನಾನು, ಕೇಳ್ಪುರೋ
ಹಿತರೊಳೆನ್ನನು ಬೃಹಸ್ಪತಿಮುಖ್ಯನೆಂದರಿಯೊ,
ಸ್ಕಂದನಲಿ ನಾನು ಸೇನಾಧಿಪತಿಗಳ ಒಳಗೆ,
ಸಿಂಧುವಿನಲಿ ನಾ ಸರಸ್ಸಿನ ವೃಂದದೊಳಗೆಲ್ಲ,
ಭೃಗು ಮುನಿಪ ನಾನು ಮಹರ್ಷಿ ಗಣಗಳೊಳು, ಬಹು
*ಗಿರಗಳೊಳಗೆ ಓಂಕಾರದಲಿ ನಾನು,
ಯಜ್ಞ ವೊತ್ತಗಳೊಳಗೆ ಜಪಯಜ್ಞದಲಿ ನಾನು,
ಸ್ಥಾವರಾದಿಗಳೊಳಗೆ ನಾ ಹಿಮಾಚಲವೆಂಬ ನಗದಲಿಹೆ,
ಎಲ್ಲ ವೃಕ್ಷಗಳೊಳಶ್ವತ್ಥ ವೃಕ್ಷದಿ ನಾನು,
ಎಲ್ಲ ದೇವರ್ಷಿ ಗಣದಲಿ ನಾನು ನಾರದನೊ,
ಗಂಧರ್ವರೊಳು ನಾನು ಚಿತ್ರರಥನಲಿ, ಸಿಧ್ಧ
ವೃಂದದೊಳು ನಾನು ಅವತರಿಸಿದೆನು ಕಪಿಲಾಖ್ಯ

*ಗಿರಾ = ವಾಕ್ಯ

ಅಶ್ವತ್ಥಸ್ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ
ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ೨೬

ಉಚ್ಚೈಶ್ಶ್ರವಸ ಮಶ್ವಾನಾಂ ವಿದ್ಧಿಮಾಮಮೃತೋದ್ಭವಮ್
ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ೨೭

ಆಯುಧಾನಾಮಹಂ ವಜ್ರಂ ಧೇನೂನಾ ಮಸ್ಮಿ ಕಾಮಧುಕ್
ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ೨೮

ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಂ
ಪಿತೃಣಾಮರ್ಯಮಾಚಾಸ್ಮಿ ಯಮಸ್ಸಂಯಮತಾಮಹಂ ೨೯

---

ನೆಂದೆನಿಸಿಕೊಂಬೆ, ಕುದುರೆಗಳ ಮೊತ್ತದಲಿ ಕೇ
ಳ್ಸಿಂಧುವಿನೊಳಮೃತದೊಡ ಹುಟ್ಟಿದುಚ್ಚೈಶ್ರವದಿ
ಎನ್ನ ತಿಳಿ, ಮತ್ತೆ ಮದ್ದಾನೆ ಗಣದೊಳು ನಾನು
ಘನ್ನ ಐರಾವತನು, ನರರೊಳಗೆ ನೃಪ ನಾನು,
ವರ ಆಯುಧಗಳೊಳಗೆ ವಜ್ರಾಯುಧದಿ ನಾನು,
ತುರುವೃಂದದೊಳು ಕಾಮಧೇನುವಿನೊಳಿಹೆ ನಾನು,
ಜನರ ಜನನಕೆ ಕಾರಣಾದವರ ಮೊತ್ತದೊ
ಳ್ಮನಸಿಜನು ನಾನು, ಸರ್ಪಗಳ ಗಣದೊಳು ನಾನು
ಇರುವೆ ವಾಸುಕಿಯಲ್ಲಿ, ನಾಗಸರ್ಪಗಳೊಳಗೆ
ಧರೆಯ ಶಿರದಲಿ ಪೊತ್ತ ಶೇಷನಲಿ ನಾನಿರುವೆ,
ಉದಕಾಭಿಮಾನಿ ಸುರರೊಳಗೆ ವರುಣನು ನಾನು,
ಇದ ಕೇಳು ಪಿತೃ ಗಣಗಳೊಳಗೆ ಅರ್ಯಮ ನಾನು,
ನರರ ಶಿಕ್ಷಿಪರೊಳಗೆ ನಾ ಕೃತಾಂತನು ಕೇಳು,
ಮರಳಿ ದೈತ್ಯರ ಮೊತ್ತದೊಳಗೆ ನಾ ಪ್ರಹ್ಲಾದ,
ಎಣಿಕೆ ಮಾಳ್ಪವರೊಳಗೆ ಕಾಲನಲಿ ನಾನು, ಮೃಗ

ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್
ಮೃಗಾಣಾಂಚ ಮೃಗೇಂದ್ರೋಽಹಂ ವೈನತೇಯಶ್ಚಪಕ್ಷಿಣಾಮ್ ೩೦

ಪವನಃ ಪವತಾಮಸ್ಮಿ ರಾಮಶ್ಶಸ್ತ್ರ ಭೃತಾಮಹಮ್
ಝುಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ೩೧

ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ
ಅಧ್ಯಾತ್ಮ ವಿದ್ಯಾ ವಿದ್ಯಾನಾಂ ವಾದಃ ಪ್ರವದತಾ ಮಹಮ್ ೩೨

ಅಕ್ಷರಾಣಾ ಮಕಾರೋಽಸ್ಮಿ ದ್ವಂದ್ವ ಸ್ಸಾಮಸಿಕಸ್ಯಚ
ಅಹಮೇವಾಕ್ಷಯಃ ಕಾಲೋಧಾತಾಽಹಂ ವಿಶ್ವತೋಮುಖಃ ೩೩

---

ಗಣದೊಳಗೆ ನಾನು ಹರ್ಯಕ್ಷ, ಪಕ್ಷಿಗಳೊಳಗೆ
ಗರುಡನಲಿ ನಾನು, ಅತಿ ವೇಗದಿಂ ಪ್ಲವನ ಮಾ
ಳ್ಪರ ಮಧ್ಯದಲಿ ಪವನನಲಿ ನಾನು,
ಶಸ್ತ್ರಧಾರಿಗಳೊಳಗೆ ರಾಮನೆಂದೆನಿಸಿಕೊಂಡವತ
ರಿಸಿ ಜಗದಿ ಪ್ರಖ್ಯಾತನಾದೆನೊ ನಾನು,
ಝುಷಾಳಿಗಳೊಳಗೆ ನೆಗಳಿನಲಿ ನಾನು,
ನದ್ಯಾದಿ ತೀರ್ಥಗಳೊಳಗೆ ಮಿಗಿಲೆನಿಪ ನಾನಿದ್ದು ಜಾಹ್ನವಿಯು,
ಸೃಷ್ಟರಾಗುವರಿಗಾದ್ಯಂತ ಮಧ್ಯಮ ನಾನು,
ವಿದ್ಯದೊಳ್ಧ್ರುವ ಪದವನೀವ ಅಧ್ಯಾತ್ಮ ವಿದ್ಯದಿ ನಾನು,
ಹಲವು ಪ್ರವಾದಮೊಳ್ತತ್ವವಾದದಿ ನಾನು,
ತಿಳಿಯೊ ವರ್ಣಗಳ ಮೊತ್ತದಿ ಅಕಾರದಿ ನಾನು,
ಬಲು ಸಮಾಸಗಳೊಳಗೆ ನಾನು ದ್ವಂದ್ವ ಸಮಾಸ,
ಅಳಿಯದಿಹ ಕಾಲನಾಮಕ ನಾನು, ವಿಶ್ವತೋ
ಮುಖಧಾತ ನಾನು, ಎಲ್ಲರ ಕೊಲ್ಲುತಿಹ ಮೃತ್ಯು
ಅಖಿಲ ಮುಂದಾಗುವುದಕೆಲ್ಲ ಉದ್ಭವ ನಾನು,

ಮೃತ್ಯುಸ್ಸರ್ವಹರಶ್ಚಾಹ ಮುದ್ಭವಶ್ಚ ಭವಿಷ್ಯತಾಮ್
ಕೀರ್ತಿಶ್ರೀರ್ವಾಕ್ಚನಾರೀಣಾಂ ಸ್ಮೃತಿರ್ಮೇಧಾ ಧೃತಿಃಕ್ಷಮಾ ೩೪

ಬೃಹತ್ಸಾಮ ತಥಾಸಾಮ್ನಾಂ ಗಾಯತ್ರೀ ಛಂದಸಾಮಹಮ್
ಮಾಸಾನಾಂ ಮಾರ್ಗಶೀರ್ಷೋऽಹಮೃತೂನಾಂ ಕುಸುಮಾಕರಃ ೩೫

ದ್ಯೂತಂಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್
ಜಯೋऽಸ್ಮಿ ವ್ಯವಸಾಯೋऽಸ್ಮಿ ಸತ್ತ್ವಂಸತ್ವವತಾಮಹಮ್ ೩೬

ವೃಷ್ಣೀನಾಂ ವಾಸುದೇವೋऽಸ್ಮಿ ಪಾಂಡವಾನಾಂ ಧನಂಜಯಃ
ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾಕವಿಃ ೩೭

---

ಸಿರಿ ಕೀರ್ತಿ ವಾಕ್ಯ ಸುಂದರರಾದ ನಾರಿಯೊ
ಳಿರುವೆ, ಧೃತಿ ಮೇಧಾ ಸ್ಮೃತಿ ಕ್ಷಮಾ ಗುಣದೊಳಗೆ-
ಅನುಗಾಲ ತನ್ನಿಯಾಮಕರೊಳಗೆ ನಾನು, ಕೇ
ಳ್ಪನ ಸಾಮದೊಳು ಬೃಹತ್ಸಾಮದಲಿ ನಾನು, ಛಂ
ದಸ್ಸಿನೊಳು ಗಾಯತ್ರಿ ಛಂದವನು ನಾನು, ದ್ವಾ
ದಶತಿಂಗಳೊಳು ಮಾರ್ಗಶೀರ್ಷ ಮಾಸದಿ ನಾನು,
ಋತುಗಳೊಳು ಕುಸುಮಾಕರಾಖ್ಯ ಋತು ನಾನು, ಕೇ
ಳತಿಛಲದಿ ಯುತರೊಳಗೆ ದ್ಯೂತದಲಿ ನಾನು, ಪಾ
ರ್ಥನೆ ಕೇಳು ತೇಜಸ್ವಿಗಳೊಳು ತೇಜದಿ ನಾನು,
ಘನ ಜಯದಿ ನಾನು, ವ್ಯವಸಾಯದಲಿ ನಾನು, ಸ
ತ್ವವನುಳ್ಳ ಜನರೊಳಗೆ ಸತ್ವದಲಿ ನಾನು, ಯಾ
ದವರೊಳಗೆ ವಾಸುದೇವನು ನಾನು, ಪಾಂಡು
ನಂದನರೊಳಗೆ ನಾ ಧನಂಜಯನೊ, ವೇ
ದವ್ಯಾಸ ಮುನಿಪನಾ ಸರ್ವ ಮುನಿಗಳ ವೊತ್ತದಲಿ,
ಕವಿಗಳೊಳು ಉಸಿನಾಖ್ಯ ಕವಿಯಲಿ ನಾನು, ದಂಡಿ
ಸುವರೊಳಗೆ ದಂಡದಿ ನಾನು, ಗೆಲುವ ಬಯಸುವರಲ್ಲಿ
ತದುಪಾಯ ನೀತಿಯಲಿ ನಾನು, ಗುಹ್ಯಗಳೊಳಗೆ

ದಂಡೋದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್
ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ೩೮
ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹ ಮರ್ಜುನ
ನತದಸ್ತಿವಿನಾ ಯತ್ಸ್ಯಾತ್ ಮಯಾಭೂತಂ ಚರಾಚರಂ ೩೯
ನಾಂತೋಽಸ್ಮಿ ಮಮದಿವ್ಯಾನಾಂ ವಿಭೂತೀನಾಂ ಪರಂತಪ
ಏಷತೋದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋಮಯಾ ೪೦

---

ಸದಮೌನದಲಿ ನಾನು, ಜ್ಞಾನಯುತರೊಳಗೆ
ನಾನಿರುವೆ ಜ್ಞಾನದೊಳೆಂದನು, (೨೧ ೩೮)

ಷಟ್ಪದೀ ರೂಪಕತಾಳ

ಎನ್ನ ಸಾನ್ನಿಧ್ಯವಿಲ್ಲದೆ ಲೋಕದೊಳು ಕೇಳು
ಇನ್ನೀ ಚರಾಚರ ಪ್ರಾಣಿ ವರ್ಗಗಳಿಲ್ಲ
ಘನ್ನ ಮಹಿಮೆಯೊಳು ನಾನಿವುಗಳೆಲ್ಲದರೊಳಗೆ ವ್ಯಾಪ್ತ
ನಾಗಿರುತಿಪ್ಪೆನೈ
ಸನ್ನುತರು ಬ್ರಹ್ಮರುದ್ರಾದಿ ಸುರನರರಲ್ಲು
ತನ್ನಿಯಾಮಕನಾಗಿ ನಾನಿದ್ದು ಪರಿಪರಿಯ
ಘನ್ನ ಚೇಷ್ಟೆಗಳನವರಿಂದ ಮಾಡಿಸುತಿರ್ಪೆ, ಎನ್ನ ಹೊರ
ತನ್ಯವಿಲ್ಲೈ ೩೯

ಷಟ್ಪದೀ ತ್ರಿಪುಟತಾಳ

ಎಲೆ ಪರಂತಪ ದಿವ್ಯವೆನಿಸುವ
ಹಲವು ಪರಿಯ ವಿಭೂತಿ ರೂಪಕೆ
ಸಲೆ ಪೊದಲು ಕಡೆಯಿಲ್ಲವೆನ್ನ ವಿಭೂತಿ ವಿಸ್ತರದೀ
ತಿಳಿಯೊ ನಾನೀಗ್ಹೇಳಿದುದು ಕುರು
ಕುಲ ತಿಲಕ ಸಂಕ್ಷೇಪದಿಂದಲಿ
ಕೆಲಕೆಲವ ನಿನಗ್ಹೇಳಿದೆನು ಪ್ರಾಧಾನ್ಯದಿಂದೆಂದಾ ೪೦

ಯದ್ಯದ್ವಿಭೂತಿ ಮತ್ಸತ್ತ್ವಂ ಶ್ರೀಮದೂರ್ಜಿತಮೇವವಾ
ತತ್ತದೇವಾವಗಚ್ಛತ್ವಂ ಮಮತೇಜೋಂಶ ಸಂಭವಂ ೪೧

ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನಸ್ಥಿತೋ ಜಗತ್ ೪೨

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ವಿಭೂತಿಯೋಗೋ**ನಾಮ ದಶಮೋಽಧ್ಯಾಯಃ

---

ಧರೆಯೊಳಗೆ ಆವಾವ ವಸ್ತುಗ
ಳಿರುವುವತಿ ಸೌಂದರ್ಯ ವಿಭವದಿ
ಪರಿಪರಿಯ ಅತಿಶಯದಿ ಊರ್ಜಿತವಾಗಿ ಮೆರೆಯುತಲಿ
ಇರಲು ತತ್ತದ್ವಸ್ತುಗಳು ಮ
ತ್ಪರಮ ತೇಜೋಂಶದಲಿ ಸಂಭವಿ
ಸಿರುವುವದರೊಳು ಮದ್ವಿಭೂತಿಯ ರೂಪವರಿಯೆಂದ ೪೧

ಎಲೆ ಧನಂಜಯ ಸೂರ್ಯ ಮೊದಲಾ
ದ್ದಲವು ಅಲ್ಪ ವಿಭೂತಿಗಳ ತಿಳಿ
ವಳಿಕೆಯಿಂ ನಿನಗಾಹುದೇಂ ಪೂರ್ವೋಕ್ತಿಗಳ ನೆನೆದು
ತಿಳಿಯೊ ಈ ಜಗವೆಲ್ಲ ನಾ ಹೊರ
ಗೊಳಗೆ ಏಕಾಂಶದಲಿ ವ್ಯಾಪಿಸಿ
ನೆಲೆಸಿಹೆನು ಕೇಳಿಂದಿರಾಪತಿ ವಿಠಲನೋ ನಾನು ೪೨

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ "**ಗೀತಾರಂಜನಾ**"ಖ್ಯ ಗ್ರಂಥೇ
**ವಿಭೂತಿಯೋಗೋ**ನಾಮ
ದಶಮೋಽಧ್ಯಾಯಃ



ಹರಿಃ ಓಂ

# ಹನ್ನೊಂದನೆಯ ಅಧ್ಯಾಯ

ಅರ್ಜುನ ಉವಾಚ:—

ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮ ಸಂಜ್ಞಿತಮ್
ಯುತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋಽಮಮ ೧

ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ
ತ್ವತ್ತಃ ಕಮಲಪತ್ರಾಕ್ಷ ಮಹಾತ್ಮ್ಯಮಪಿಚಾವ್ಯಯಂ ೨

---

ಷಟ್ಪದೀ ತ್ರಿಪುಟತಾಳ

ಎನ್ನನುಗ್ರಹ ಮಾಡಲೋಸುಗ
ಉನ್ನತದ ಅಧ್ಯಾತ್ಮ ಸಂಜ್ಞಿಕ
ಘನ್ನ ಗೋಪ್ಯಗಳಾವುದಾವಿಧ ಶ್ರೇಷ್ಠವಾಗಿದ್ದಾ
ನಿನ್ನ ಹೇಳಿಕೆ ವಚನದಿಂದಲಿ
ಎನ್ನ ಈ ವಿಧ ಮುಂದುಗಾಣದ
ಘನ್ನ ಮೋಹವು ಅಳಿಯಿತ್ತೈ ಕೇಳೆಂದನಾ ಪಾರ್ಥ ೧

ದೇವ ಕಮಲದಳಾಕ್ಷ ಶ್ರುಣು ನಾ
ನಾ ವಿಧ ಪ್ರಾಣಿಗಳ ಸಂಭವ
ಜೀವನವು ಮೃತಿ ನಿನ್ನ ದೆಸೆಯಿಂದಾಗುತಿಹುದೆಂದೂ
ಏವ ಮಾದ್ಯಕ್ಷಯ ಮಹಿಮೆಗಳ
ನೀನೊಲಿದು ಹೇಳಿದುದು ನಿನ್ನಿಂ
ದೀ ವಿಧವು ವಿಸ್ತರದಿ ಕೇಳಲ್ಪಟ್ಟಿತೆನ್ನಿಂದಾ ೨

ಏವಮೇ ತದ್ಯಥಾऽऽತ್ಥತ್ವ ಮಾತ್ಮಾನಂ ಪರಮೇಶ್ವರ
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರ್ಯಂ ಪುರುಷೋತ್ತಮ ೩

ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ
ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಂ ೪

ಶ್ರೀ ಭಗವಾನುವಾಚ:—

ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ
ನಾನಾ ವಿಧಾನಿ ದಿವ್ಯಾನಿ ನಾನಾ ವರ್ಣಾಕೃತೀನಿಚ ೫

---

ಈ ವಿಧದಿ ನಿನ್ನಾತ್ಮ ವೈಭವ
ನೀ ನೊಲಿದು ಹೇಳಿದುದು ಸರ್ವವು
ಭಾವಿಸುವೆ ನಿಜವೆಂದು ಪುರುಷೋತ್ತಮನೆ ಕೇಳಿನ್ನೂ
ಈ ವಿಮಲವಾದಂಥ ನಿನ್ನಯ
ಪಾವನದ ಸದ್ರೂಪ ವಿಭವವ
ದೇವ ನೋಡಲು ಇಚ್ಛಿಸುವೆ ನಾನೆಂದನಾ ಪಾರ್ಥ ೩

ನಿನ್ನ ಮಂಗಳ ರೂಪ ನೋಡಲು
ಎನ್ನ ದೆಸೆಯಿಂ ಶಕ್ಯವಾಗುವ
ದೆನ್ನುತಲಿ ಇದು ನಿನ್ನ ಮನಸಿಗೆ ಬಂದ ಪಕ್ಷದಲಿ
ಘನ್ನ ಯೋಗೀಶ್ವರನೆ ನೀನೆನ
ಗಿನ್ನು ಅವ್ಯಯ ಆತ್ಮವೈಭವ
ವನ್ನೆ ತೋರಿಸು ಕರುಣದಿಂದಲಿಯೆಂದು ಕೈ ಮುಗಿದಾ ೪

ಷಟ್ಪದೀ ರೂಪಕತಾಳ

ಎಲೆ ಧನಂಜಯ ನೋಡು ಎನ್ನ ರೂಪಗಳನ್ನು
ಹಲವು ವಿಧ ದಿವ್ಯ ದೇದೀಪ್ಯ ಮಾನಗಳಾದ
ಬಲು ಬಗೆಯ ವರ್ಣ ಆಕೃತಿಗಳಿಂದೊಪ್ಪುತಿಹ ಸುಲಲಿ
[ತಾತ್ಮನ ರೂಪಕೆ

ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ
ಬಹೂನ್ಯದೃಷ್ಟ ಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ೬

ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಂ
ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ೭

ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಸಾ
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯಮೇ ಯೋಗಮೈಶ್ವರಂ ೮

---

ನೆಲೆಯಿಲ್ಲವೊಂದು ರೂಪದಲಿ ಈದೃಶವಾದ
ಕಳೆಗಳಿಂದಲಿ ಯುಕ್ತ ರೂಪಗಳು ಶತಶ ಮು
ತ್ಥಲವು ಕೋಟಿಶ ಅನಂತಶಹ ರೂಪಗಳಿಹುವು ತಿಳಿಯೆಂ
[ದನಾ ದೇವನು ೫

ಭರತ ಕುಲಜನೆ ನೋಡು ಒಂದು ರೂಪದಲಿ ಹ
ನ್ನೆರಡು ಸೂರ್ಯರ ಅಷ್ಟವಸುಗಳನೆ ಅರಿ ಭಯಂ
ಕರ ರುದ್ರರೇಕಾದಶರು ಒಂದು ಕಡಮ್ಯಾದ ಮರುತಗಣ
[ಪಂಚಾಶತೂ

ಸುರವೈದ್ಯರಿಬ್ಬರಶ್ವಿನಿಗಳನೆ ಹಾಂಗೆ ಮತ್ತಿತರು
ತರ ಅದೃಷ್ಟ ಪೂರ್ವಗಳಾದ ಬಹು ವಿಧಾ
ಶ್ಚರಿಯಗಳ ನೋಡು ಮದ್ರೂಪದೊಂದವಯವದೊಳಿರು
[ತಿಹುದು ಜಗವೆಲ್ಲವು (೬-೭)

ಎನ್ನ ದೇಹದಿ ಚರಾಚರ ಜಗಜ್ಜಾಲಗ-
ಳನ್ನೆ ನೋಡಿನ್ನು ಮತ್ತಾವದೊಂದಾಶ್ಚರ್ಯ
ವನ್ನೀಗ ನೋಡಬೇಕೆಂದು ಇಚ್ಛೆಪೆಯೊ ಅದರನ್ನೆ ನೀ
| ನೋಡೆಂದನು

ಸಂಜಯ ಉವಾಚ:—

ಏವಮುಕ್ತ್ವಾ ತತೋರಾಜನ್ ಮಹಾಯೋಗೇಶ್ವರೋ ಹರಿಃ
ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ ೯

ಅನೇಕ ವಕ್ತ್ರನಯನಂ ಅನೇಕಾದ್ಭುತ ದರ್ಶನಂ
ಅನೇಕ ದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಂ ೧೦

ದಿವ್ಯ ಮಾಲ್ಯಾಂಬರಧರಂ ದಿವ್ಯ ಗಂಧಾನುಲೇಪನಂ
ಸರ್ವಾಶ್ಚರ್ಯ ಮಯಂದೇವಮನಂತಂ ವಿಶ್ವತೋಮುಖಂ ೧೧

ದಿವಿ ಸೂರ್ಯ ಸಹಸ್ರಸ್ಯ ಭವೇದ್ಯುಗಪದುತ್ಥಿತಾ
ಯದಿ ಭಾಸ್ಸದೃಶೀ ಸಾಸ್ಯಾದ್ಭಾಸಸ್ತಸ್ಯ ಮಹಾತ್ಮನಃ ೧೨

---

ಎನ್ನ ನೋಡಲು ಶಕ್ತನಲ್ಲ ಪಾಂಡವನೆ ಈ
ನಿನ್ನ ನೇತ್ರಗಳಿಂದ ಅದು ಕಾರಣದಿ ನಿನಗೆ
ಇನ್ನು ಕೊಡುವೆನು ದಿವ್ಯ ನೇತ್ರಗಳ ನೋಡು ನೀ ಎನ್ನ
[ಯೋಗೈಶ್ವರ್ಯವ ೮

ಕೆಂದಾರ್ಥಚಂದ್ರಿಕೆ

ಹೀಗೆಂದು ನುಡಿದು ರಾಜನೆ ಕೃಷ್ಣನಾಗ ತಾ ನೊಲಿದು ಪ.

ಸಾಗರಶಯನ ಸರ್ವಾಂತರ್ಗತನು ಮಹಾ
ಯೋಗೀಶ ಹರಿಯು ಆಮೋಲತಿ ಕುರುಣದಿ, ಹೀಗೆಂದನು ಅ.

ಪರಮ ಸುರೂಪದ ವಿಭವವ, ಕುರುನಂದನ ಸವ್ಯಸಾಚಿ ಗೋಸ್ಕರದಲಿ ಆ
ಮುರರಿಪು ಕರುಣದಿ ತೋರಿದ ಪರಿಯನೆ ವಿಸ್ತರಿಸಲೆನ್ನ ಅಳವಲ್ಲ ಕೇಳೊ
ಶ್ರೀ ಹರಿಯ ಮಂಗಳಗುಣ ಭಾಳೋ ನಳಿನಜಭವಮುಖ ಸುರರಿಗೆ ವರ್ಣಿಸ
[ಲಳವಲ್ಲ
ಅಮಿತ ಗುಣಾವಳಿ ಪೊಗಳಲೆನ್ನಳವಲ್ಲ ಕೇಳೋ ಶ್ರೀ ಹರಿಯ ಮಂಗಳ ಗುಣ
[ಭಾಳೋ ೧

ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ
ಅಪಶ್ಯನ್ದೇವದೇವಸ್ಯ ಶರೀರೇ ಪಾಂಡವಸ್ತದಾ ೧೩

ತತಸ್ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ
ಪ್ರಣಮ್ಯ ಶಿರಸಾದೇವಂ ಕೃತಾಂಜಲಿ ರಭಾಷತ ೧೪

---

ಬಹು ಮುಖ ಬಹಳಂಬಕಗಳು ಬಹಳಾದ್ಭುತ ದರುಶನುಳ್ಳ ಅನುಪಮವಾದಾ
ಬಹು ದಿವ್ಯಾಭರಣಂಗಳು ಬಹಳುದ್ಧೃತ ದಿವ್ಯ ಆಯುಧಂಗಳ ಧರಿಸೀ
ನೋಡಲು ಕೌತುಕಂಗಳೀವೆನಿಸಿ ಅಂಗಾಕೆ ದಿವ್ಯ ಸುಗಂಧವು ಅನುಲೇಪ
[ನಂಗಳು
ದಿವ್ಯ ಕುಸುಮಗಳು ಪೀತಾಂಬರಗಳು ಧರಿಸಿ ನೋಡಲು ಕೌತುಕಂಗಳಿವೆನಿಸಿ ೨

ಸರ್ವಾಶ್ಚರ್ಯದ ಮಯಹರಿ ಸರ್ವೇಶ್ವರನಂತ ವಿಶ್ವತೋಮುಖನಾದಾ
ಸರ್ವಾಶ್ಚರ್ಯದ ರೂಪವು ಸರ್ವೋತ್ತಮ ತೋರುತಿರಲು ಗಗನ ಪಥದೊಳು
ಸಾವಿರ ಸೂರ್ಯ ಯುಗಪದುದಿಸಲು ಜಗದೊಳದರ ಕಾಂತಿಯೆಷ್ಟೊ
ತತ್ಸದೃಶಕೆ ಮಿಗಿಲಾಹದೀ ಮಹಾತ್ಮನದೀಪ್ತಿ ವಿಭವಕೆ
ಗಗನ ಪಥದೊಳು ಸಾವಿರ ಸೂರ್ಯ ಯುಗಪಾದುದಿಸಲು ೩

ಪರಮನ ಒಂದವಯವದೊಳಗಿರುತಿಹ ಬಹು ವಿಧ ವಿಭಕ್ತವಾದ ಜಗವೆನ
ಲ್ಹರಿದೇವದೇವಸಂಗದಿ ಕುರುನಂದನ ಕಂಡನಾಗಾ ಕೇಳ್ವೆಯ ನೃಪನೆ
ಧೃತರಾಷ್ಟ್ರ ಭೂಪಾಲನೆ ಇದನೆ, ಶ್ರೀಲೋಲನಂಗದಿ
ಪರಿಪರಿ ಕೌತುಕ ಜಾಲಂಗಳೊಳು
ಯೋಗ್ಯತಾನುಸಾರದಿ ಕಂಡ, ಕೇಳಯ್ಯ ನೃಪತೆ ಧೃತರಾಷ್ಟ್ರ ಭೂಪಾಲನೆ
[ಇದನೆ ೪

ತದನಂತರದಲಿ ಪಾರ್ಥನು ಗದಗುಟ್ಟುತ ವಿಗತಸ್ಮಯದಿ ಆವರಿಸುತಲೂ
ಮುದದಲಿ ರೋಮಾಂಚನದಿಂದದುಭುತ ಮಹಿಮಿಂದಿರೇಶ ವಿಠಲನೀನೆಂದೂ
ಕೃತಾಂಜಲಿ ಪುಟದಿ ನಿಂದೂ ವಟಪತ್ರಶಯನಾಗೆ ನಮಿಸೀ
ಸಾಷ್ಟಾಂಗದಿ ಚಟುಲ ವಿಕ್ರಮ ಪಾರ್ಥ ನುಡಿದಾನೀ ವಿಧದಿಂದ
ವಿಠಲ ನೀನೆಂದು ಕೃತಾಂಜಲಿ ಪುಟದಲಿ ನಿಂದೂ ೫
(೯-೧೪)

ಅರ್ಜುನ ಉವಾಚ:—

ಪಶ್ಯಾಮಿ ದೇವಾಂಸ್ತವ ದೇವ ದೇಹೇ ಸರ್ವಾಸ್ತಥಾ ಭೂತ ವಿಶೇಷ
[ಸಂಘಾನ್
ಬ್ರಹ್ಮಾಣಮೀಶಂ ಕಮಲಾಸನಸ್ಥಮ್ ಋಷೀಂಶ್ಚ ಸರ್ವಾನುರಗಾಂಶ್ಚ
[ದಿವ್ಯಾನ್ ೧೫

ಅನೇಕ ಬಾಹೂದರ ವಕ್ತ್ರ ನೇತ್ರಂ ಪಶ್ಯಾಮಿ ತ್ವಾಂ ಸರ್ವತೋಽ
[ನಂತರೂಪಂ
ನಾಂತಂ ನ ಮಧ್ಯಂ ನಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವ
[ ರೂಪ ೧೬

ಕಿರೀಟಿನಂ ಗದಿನಂ ಚಕ್ರಿಣಂ ಚ ತೇಜೋರಾಶಿಂ ಸರ್ವತೋದೀಪ್ತಿ
[ಮಂತಂ
ಪಶ್ಯಾಮಿ ತ್ವಾಂ ದುರ್ನಿರೀಕ್ಷಂ ಸಮಂತಾ ದ್ದೀಪ್ತಾನಲಾರ್ಕದ್ಯುತಿ
[ಮಪ್ರಮೇಯಂ ೧೭

---

ಆರ್ಯಾ:—

ಎಲೆ ದೇವನೆ ತ್ವದ್ದೇಹದಿ ದೇವತೆಗಳನೆಲ್ಲರ ನೋಡುವೆ ಹಾಂಗೆ
ಹಲವು ವಿಧದ ಪ್ರಾಣಿಗಳ ಸಮೂಹಗಳನ್ನೆ ಕಾಣುವೆನು ನಾ ಹೀಂಗೆ ೧

ಚತುರಮುಖನ ಕಮಲಾಸನನಾಂಕದಿ ಸ್ಥಿತ ರುದ್ರನ ಋಷಿಗಳನೆಲ್ಲ
ಪತಿತಪಾವನನೆ ಬಹಳ ಸರ್ಪಂಗಳ ತತಿನಿನ್ನೊಳು ಕಾಣುವೆನಲ್ಲಾ ೨

ಹಲವು ಬಾಹು ಮುಖ ಉದರ ನೇತ್ರದಿಂದಲಿ ಯುತ ತವರೂಪಗಳನ್ನು
ಇಳೆಯೊಳು ಸರ್ವ ದೇಶಗಳೊಳು ನಿನ್ನಯ ಹಲವು ರೂಪ ಕಾಣುವೆ ನಾನು೩

ನಿನ್ನ ರೂಪಕಾದ್ಯಂತ ಮಧ್ಯವಿಲ್ಲಿನ್ನು ಕೇಳು ವಿಶ್ವೇಶ್ವರನೆ
ಘನ್ನ ವಿಶ್ವರೂಪವ ನೋಡಿದೆನಾ ಧನ್ಯನಾದೆ ಯದುಪುಂಗವನೆ ೪

(೧೫-೧೬)

ತ್ವಮಕ್ಷರಂ ಪರಮಂ ವೇದಿತವ್ಯಂ ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ
ತ್ವಮವ್ಯಯಶ್ಶಾಶ್ವತ ಧರ್ಮಗೋಪ್ತಾ ಸನಾತನಸ್ತ್ವಂ ಪುರುಷೋ
[ಮತೋಮೇ ೧೮

ಅನಾದಿ ಮಧ್ಯಾಂತ ಮನಂತವೀರ್ಯ ಮನಂತಬಾಹುಂ ಶಶಿಸೂರ್ಯ
[ನೇತ್ರಂ
ಪಶ್ಯಾಮಿ ತ್ವಾಂ ದೀಪ್ತ ಹುತಾಶವಕ್ತ್ರಂ ಸ್ವತೇಜಸಾ ವಿಶ್ವಮಿದಂ
[ತಪಂತಂ ೧೯

---

ಷಟ್ಪದೀ ರೂಪಕತಾಳ

ವರ ಕಿರೀಟ ಸುಚಕ್ರ ಗದೆಯನೆ
ಧರಿಸಿ ತೇಜೋ ರಾಸಿಯಾಗಿಹ
ಸರುವ ದೆಸೆಯಲಿ ಬೆಳಗುತಿಹ ದೀಪ್ತಾನಲಾರ್ಕಗಳ
ವರದ್ಯುತಿಗೆ ಮಿಗಿಲೆನಿಪ ಅಂಬಕ
ಕೊರೆವ ನೋಡಲಸಾಧ್ಯವಾಗ್ಯುರು
ತರದಿ ಹೊಳೆಯುವ ಅಪ್ರಮೇಯನ ಕಾಂಬೆ ದೆಸೆಗಳೊಳು ೧೭

ನೀನೆ ಅಕ್ಷರ ಪರಮನನುಪವ
ನೀನೆ ತಿಳಿಯಲು ತಕ್ಕವನು ಪ್ರಭು
ನೀನೆ ವಿಶ್ವಕೆ ಪರಮನೆನಿಪ ನಿಧಾನ ನವ್ಯಯನು
ನೀನೆ ಶಾಶ್ವತ ಧರ್ಮರಕ್ಷಕ
ನೀನೆ ಕೇಳು ಪುರಾಣ ಪುರುಷನು
ನೀನೆನಗೆ ಸಮ್ಮತನು ಕರುಣಾಸಿಂಧು ನೀನೆಂದ ೧೮

ಮೊದಲು ತುದಿಮಧ್ಯಂಗಳಿಲ್ಲದ
ಅದುಭುತಾನಂತಮಿತ ಸತ್ವಗ
ಳ್ಹುದುಗಿರುವ ಅ-ನಂತಬಾಹುಗಳುಳ್ಳ ನಿನ್ನನ್ನು

ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ
[ಸರ್ವಾಃ
ದೃಷ್ಟ್ವಾಽದ್ಭುತಂ ರೂಪಮುಗ್ರಂ ತವೇದಂ ಲೋಕತ್ರಯಂ ಪ್ರವ್ಯ
[ಥಿತಂ ಮಹಾತ್ಮನ್ ೨೦

ಅಮೀ ಹಿ ತ್ವಾಂ ಸುರಸಂಘಾವಿಶಂತಿ ಕೇಚಿದ್ಭೀತಾಃ ಪ್ರಾಂಜಲಯೋ
[ಗೃಣಂತಿ
ಸ್ವಸ್ತೀತ್ಯುಕ್ತ್ವಾ ಮಹರ್ಷಿ ಸಿದ್ಧ ಸಂಘಾಃ ಸ್ತುವಂತಿ ತ್ವಾಂ
[ಸ್ತುತಿಭಿಃ ಪುಷ್ಕಲಾಭಿಃ ೨೧

---

ವಿಧುರವಿಗಳಾಶ್ರೈಸಿದಂಬಕ
ವದನ ದೀಪ್ತ ಹುತಾಶದಂದದಿ
ಉದಿತ ನಿನ್ನ ಪ್ರಕಾಶದಿಂದೀ ಜಗವು ತಪಿಸುವುದು ೧೯

ಧರೆಗಗನ ಮಧ್ಯ ಪ್ರದೇಶದಿ
ಪರುವ ದೆಸೆ ನಿನ್ನೊಬ್ಬನಿಂದಾ
ವರಿಸಿ ವ್ಯಾಪಿಸಿತ್ತೈ ಮಹಾತ್ಮನೆ ಪರಮ ಅದ್ಭುತದಾ
ವರ ಭಯಂಕರ ಈ ವಿಧದ ನಿ
ನ್ನಿರವ ಕಂಡೀ ಮೂರು ಲೋಕದೊ
ಳಿರುವರೆಲ್ಲರು ಭಯದಿ ವ್ಯಥೆ ಪಡುತಿಹುದ ಕಾಣುತಿಹೆ ೨೦

ನಿನ್ನ ಈ ವಿಧ ದೇಹದಲಿ ಕೇ
ಳಿನ್ನು ಮುಕ್ತಿಯನೈದಿದಮರರ
ಘನ್ನ ಸಂಘ ಪ್ರವೇಶಿಸುತಲಿದೆ ಕೆಲರು ಭಯದಿಂದ
ನಿನ್ನ ಕರಗಳ ಮುಗಿದು ಪ್ರಾರ್ಥಿಪ
ರಿನ್ನು ಮಹ ಋಷಿ ಸಂಘ ಸ್ವಸ್ತ್ಯ
ಸ್ತೆನ್ನುತಲಿ ಕೊಂಡಾಡುವುದು ವರಸಿದ್ಧ ಸಂಘಗಳು ೨೧

ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ ವಿಶ್ವೇಽಶ್ವಿನೌ ಮರುತ
[ಶ್ಚೋಷ್ಮಪಾಶ್ಚ
ಗಂಧರ್ವ ಯಕ್ಷಾಸುರ ಸಿದ್ಧ ಸಂಘಾ ವೀಕ್ಷಂತೇ ತ್ವಾಂ ವಿಸ್ಮಿತಾ
ಶ್ಚೈವ ಸರ್ವೇ ೨೨
ರೂಪಂ ಮಹತ್ತೇ ಬಹುವಕ್ತ್ರ ನೇತ್ರಂ ಮಹಾಬಾಹೋ ಬಹು
[ಬಾಹೂರುಪಾದಂ
ಬಹೂದರಂ ಬಹುದಂಷ್ಟ್ರಾಕರಾಲಂ ದೃಷ್ಟ್ವಾ ಲೋಕಾಃ ಪ್ರವ್ಯಥಿತಾ
[ಸ್ತಥಾಹಮ್ ೨೩

---

ನಿನ್ನ ಪುಷ್ಕಳವಾದ ಸ್ತೋತ್ರಗ
ಳನ್ನೆ ಮಾಡುತ ಸ್ತುತಿಸುತಿಪ್ಪರು
ಇನ್ನು ರುದ್ರರು ಏಕದಶ ದ್ವಾದಶ ದಿವಾಕರರು
ಧನ್ಯರೆನಿಸುವ ಅಷ್ಟವಸುಗಳು
ಇನ್ನು ಸಾಧ್ಯರು ಅಶ್ವಿನಿಗಳಿಂ
ತಿನ್ನು ವಿಶ್ವೇದೇವತೆಗಳೀರೈದು ಜನರಿನ್ನೂ
ಮರುತರೇಳೇಳ್ಪಿತೃಗಣಂಗಳು
ಮರಳಿ ಬಹು ಗಂಧರ್ವರ್ಯಕ್ಷರು
ಸುರರ ದ್ವೇಷಿಗಳಾದ ಅಸುರರ ಮೊತ್ತಗಳು ಹೀಗೆ
ವರ ಸುಸಿದ್ಧಾಳಿಗಳು ನಿನ್ನಯ
ಇರವ ವಿಸ್ಮಿತರಾಗಿ ನೋಳ್ಪರು
ಬೆರಗನೈದಿಹರೆಲ್ಲ ಕಮಲಾಪತಿಯೆ ಕೇಳೆಂದ ೨೨
ಬಹು ಮುಖವು ಬಹು ಬಾಹುಕಂಗಳು
ಬಹಳ ತೊಡೆ ಹಲವಂಘ್ರಿ ಉದರವು
ಬಹಳ ದಾಡೆಗಳಿಂ ಭಯಂಕರವಾಗಿ ತೋರುತಿಹ
ಬಹು ಮಹತ್ತರ ನಿನ್ನ ರೂಪವ
ಬಹಳ ಬಗೆಯಲಿ ನೋಡಿ ಲೋಗರು
ಬಹು ಭಯದಿ ವ್ಯಥೆ ಪಡುವರಾ ಪರಿ ನಾನು ವ್ಯಥೆ ಪಡುವೆ ೨೩

ನಭಸ್ಪೃಶಂ ದೀಪ್ತಮನೇಕವರ್ಣಂ ವ್ಯಾತ್ತಾನನಂ ದೀಪ್ತ ವಿಶಾಲ [ನೇತ್ರಂ
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ ಧೃತಿಂ ನ ವಿಂದಾಮಿ [ಶಮಂ ಚ ವಿಷ್ಣೋ ೨೪

ದಂಷ್ಟ್ರಾಕರಾಲಾನಿ ಚ ತೇ ಮುಖಾನಿ ದೃಷ್ಟ್ವೈವ ಕಾಲಾನಲ [ಸನ್ನಿಭಾನಿ
ದಿಶೋ ನ ಜಾನೇ ನ ಲಭೇ ಚ ಶರ್ಮ ಪ್ರಸೀದ ದೇವೇಶ ಜಗನ್ನಿ [ವಾಸ ೨೫

ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ ಸರ್ವೇ ಸಹೈವಾವನಿಪಾಲ [ಸಂಘೈಃ
ಭೀಷ್ಮೋ ದ್ರೋಣಸ್ಸೂತಪುತ್ರಸ್ತಥಾಽಸೌ ಸಹಾಸ್ಮದೀಯೈರಪಿ [ಯೋಧ ಮುಖ್ಯೈಃ ೨೬

---

ಕಂದಾರ್ಥಚಂದ್ರಿಕಾ

ನಭವನೆ ಮುಟ್ಟುವ ನಿನ್ನಯ, ಪ್ರಭೆಯಿಂದಲಿ ಹಲವು ವರ್ಣಯುತ [ಬಾಯ್ದೆರೆದಾ,
ರಭಸದಿ ಬೆಳಗುವ ನೇತ್ರದ ವಿಭವವ ನಾ ಕಂಡು ಹರಿಯೆ ಮನದಿ [ಧೈರ್ಯವನೆ,
ಶಮವ ನೇನ್ನೈದೆ ಅನಘಾ ಕೇಳಿದನೆ ಘನವ್ಯಥಿತಾಂತರಾತ್ಮನೊ
ಬಹು ಭಯದಿಂದ ಅನಿಮಿಷೇಶನೆ ದಯವಲಿ ರಕ್ಷಿಸೆನ್ನನು
ಮನದಿ ಧೈರ್ಯವನೆ ಶಮವನೇನ್ನೈದೆ ಅನಘಾ ಕೇಳಿದನೆ

ಪ್ರಳಯದ ಅನಲನ ಹೋಲುವ, ಥಳಥಳಿಸುವ ಕೋರೆದಾಡೆಗಳ [ನೊತ್ತಗಳಿಂ
ದಲಿ ಅಮಿತ ಭಯಂಕರವಾದ್ದಲವಾಗಿಹ ನಿನ್ನ ಮುಖಗಳಿರವ [ನೋಡುತಲೂ,

ವಕ್ತ್ರಾಣಿ ತೇ ತ್ವರಮಾಣಾವಿಶಂತಿ ದಂಷ್ಟ್ರಾ ಕರಾಲಾನಿ ಭಯಾನಕಾನಿ
ಕೇಚಿದ್ವಿಲಗ್ನಾ ದಶನಾಂತರೇಷು ಸಂದೃಶ್ಯಂತೇ ಚೂರ್ಣಿತೈರುತ್ತ
[ಮಾಂಗೈಃ ೨೭

ಯಥಾ ನದೀನಾಂ ಬಹವೋಽಂಬುವೇಗಾಃ ಸಮುದ್ರಮೇವಾಭಿ
[ಮುಖಾ ದ್ರವಂತಿ
ತಥಾ ತವಾಮೀ ನರಲೋಕವೀರಾ ವಿಶಂತಿ ವಕ್ತ್ರಾಣ್ಯಭಿವಿಜ್ವ
[ಲಂತಿ ೨೮

---

ದೆಸೆಗಳನೆ ನಾನರಿಯೆ ಸೌಖ್ಯಗಳ ಮರಳಿ ಐದೆನೊ ಕೇಳೊ ದೇವೇಶಾ
ಲೋಕಾಕೆ ಪರಮಸ್ಥಾನಾನೆ ನೀ ಪ್ರಸನ್ನನಾಗೈಯ
ನಿನ್ನರವ ನೋಡುತಲೂ ದೆಸೆಗಳನೆ ನಾನರಿಯೆ ಸೌಖ್ಯಗಳನೂ ೨

ಧೃತರಾಷ್ಟ್ರನ ಈ ನಿಂತಿಹ ಸುತರೆಲ್ಲರು ಅವನಿಪರ ಸಂಘ ಸಹಿತರಿ
ಸ್ನತಿ ಬಲಯುತ ಭೀಷ್ಮನು ರವಿಸುತನೀ ದ್ರೋಣಾದಿ ಸೇನೆ ಮರಳಿ
[ನಮ್ಮವರು
ಸಹಿತ ಯುದ್ಧದಲಿ ಸ್ಥಿತಭಟರು ತ್ವರದಿ ಕರಾಳ ಕೋರೆಗಳುಳ್ಳ
ಭಯದ ನಿನ್ನುರುತರ ಮುಖಗಳೊಳಗೆ ಪ್ರವೇಶಿಪರು ಕೇಳ್ಮರಳಿ
ನಮ್ಮವರು ಸಹಿತ ರಣದಲಿ ಸ್ಥಿತಭಟರು ೩

ಕೆಲವರು ದಶನಾಂತರದಲಿ ಸಿಲುಕಿರೆ ತಲೆಯೊಡೆದು ಚೂರ್ಣವಾಗಿ
[ಹರನು ಹೇ
ಜಲಜಾಕ್ಷನೆ ಕಾಣುವೆ, ನದಿ ಜಲ ಬಹು ವೇಗಗಳು ಹ್ಯಾಂಗೆ ಶರಧಿಯಭಿ
[ಮುಖದೀ,
ಬರಿದ್ಹೋಗುವುದೊ ಹರಿಯೆ ಆ ವಿಧದಿ ನರಲೋಕ ವೀರರೆಲ್ಲರು ನಿನ್ನ
ಜ್ವಲಿಸುವ ವರಮುಖಗಳ ಪೊಕ್ಕು ಉರಿಯುವುದನೆ ಕಂಡೆ ಶರಧಿಯಭಿ
ಮುಖದಿ, ಬರಿದ್ಹೋಗುವುದೊ ಹರಿಯೆ ಆ ವಿಧದಿ ೪

ಯಥಾ ಪ್ರದೀಪ್ತಂ ಜ್ವಲನಂ ಪತಂಗಾ ವಿಶಂತಿ ನಾಶಾಯ ಸಮೃದ್ಧ
[ವೇಗಾಃ
ತಥೈವ ನಾಶಾಯ ವಿಶಂತಿ ಲೋಕಾಸ್ತವಾಪಿ ವಕ್ತ್ರಾಣಿ ಸಮೃದ್ಧ
[ವೇಗಾಃ ೨೯

ಲೇಲಿಹ್ಯಸೇಗ್ರಸಮಾನಃ ಸಮಂತಾಲ್ಲೋಕಾನ್ ಸಮಗ್ರಾನ್
[ವದನೆ ರ್ಜ್ವಲದ್ಭಿಃ
ತೇಜೋಭಿರಾಪೂರ್ಯ ಜಗತ್ಸಮಗ್ರಂ ಭಾಸಸ್ತವೋಗ್ರಾಃ ಪ್ರತಪಂತಿ
[ವಿಷ್ಣೋ ೩೦

---

ಉರಿಯುವ ಜ್ವಲನನ ಕಾಣುತ ತ್ವರದಲಿ ಶಲಭಗಳ ವೃಂದಗಳು ಕೆಡು
[ವುದಗೋ
ಸ್ಕರದಲಿ ಬಂದದರಲಿ ಬೀಳುವ ತೆರದಲಿ ಕೆಡುವುದಕೆ ಲೋಗರರೆ ಸತ್ವರದೀ
ಬಂದು ಬಂದು ಹುತಭುಕ್ ಸದೃಶದಲಿ ಅತಿ ಪ್ರಜ್ವಲಿಸುವ ನಿನ್ನೊದನ
ವೊತ್ತ್ರಗಳಲ್ಲಿ ವಿತತ ಮಹಿಮನೆ ಹೊಗುವರದು ಕಾಂಬೆ ನಾನಿಂದು
ಅತಿ ಸತ್ವರದಲಿ, ಬಂದು ಬಂದು ಹುತಭುಕ್ ಸದೃಶದಲಿ ೫

ಛೀಕರೀಜ್ವಲಿಸುವ ಮುಖಗಳೇನಕಗಳಿಂದೋಷ್ಟ ಪುಟನ ನೆಕ್ಕುತಲಿ,
ರಲೆ ನ್ನೇಕದಾನುಂಗುವನೋ ಈ ಲೋಕಗಳೆಂಬಂತೆ ತೋರುತಿಹುದಿನ್ನು
ನಿನ್ನ ಭಯಂಕರವಹ ತೇಜವಿನ್ನಾ ಬಹುಲೋಕದಲಿ
ತುಂಬಿ ಪ್ರತಪಿಸುವುದು ಎಲ್ಲಾದ್ರುಹಿಣಾ ಜನಕಾ ನಿನ್ನಾ ಮಹಿಮೆ
ನೇನೆಂಬೆನೊ ಇಹದಿನ್ನು ನಿನ್ನಾ ಭಯಂಕರ ತೇಜವಿನ್ನೂ

ಎಲೆ ದೇವನೆ ನೀನ್ಯಾರೆನಗೊಲಿಪ್ಪೇಳೈ ಉಗ್ರ ರೂಪನೆ ನಮಿಸುವೆ ನಿನ್ನ
ತಿಳಿಯಲು ಇಚ್ಛಿಪೆ ನಿನ್ನನು ಜಲಜಾಕ್ಷನೆ ದೇವದೇವ ಶರಣನೆಂದರಿದೂ
ಪ್ರಾಸನ್ನಾ ನಾಗ್ಹರಿಯೆ ನೀನೊಲಿದು ಪೊರೆಹೊಕ್ಕನೊ

ಆಖ್ಯಾಹಿ ಮೇ ಕೋ ಭವಾನುಗ್ರರೂಪೋ ನಮೋಽಸ್ತು ತೇ ದೇವವರ
[ಪ್ರಸೀದ
ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ ನಹಿ ಪ್ರಜಾನಾಮಿ ತವ
[ಪ್ರವೃತ್ತಿಂ ೩೧

ಶ್ರೀ ಭಗವಾನುವಾಚ:—

ಕಾಲೋಽಸ್ಮಿ ಲೋಕಕ್ಷಯ ಕೃತ್ಪ್ರವೃದ್ಧೋ ಲೋಕಾನ್ ಸಮಾಹರ್ತು
[ಮಿಹಪ್ರವೃತ್ತಃ
ಋತೇಽಪಿ ತ್ವಾಂ ನಭವಿಷ್ಯಂತಿ ಸರ್ವೇ ಯೇಽವಸ್ಥಿತಾಃ ಪ್ರತ್ಯನೀ
[ಕೇಷು ಯೋಧಾಃ ೩೨

---

ಇಂದಿರೇಶ ವಿಠಲ ನಿನ್ನವರ ಉದ್ಯೋಗದ ಆದ್ಯಂತವನ್ನರಿಯೆನೊ
ಸ್ವಾಮಿ ಶರಣಾನೆಂದರಿದು ಪ್ರಸನ್ನಾ ಸಾಗ್ಧರಿಯೆ ನೀ ನೊಲಿದೂ
೨೪-೩೧

ಸೀಸಮಾಲಿಕಾ

ಶ್ರೀ ಭಗವಾನುವಾಚ:—

ಘನವಾಗಿ ಹೆಚ್ಚಿದೀ ಲೋಕವನೆ ಕೊಲ್ಲಲ್ಕೆ
ಅನುವಾದ ಕಾಲನಾಮಕನು ನಾನು
ಧರೆಯ ಭಾರವನಿಳುಹಲೋಸುಗದಿ ಲೋಗರನೆ
ಮರಣವೈದಿಸಲು ಈ ಲೋಕದಲ್ಲೀ
ಅವತರಿಸಿ ಇದಕೆ ಉದ್ಯೋಗಿಸಿದ ಇಂದಿರಾ
ಧವ ನಾನು ತಿಳಿಯೊ ಹೇ ಪಾಂಡುಸುತನೆ
ನಿನ್ನ ಹೊರತಾಗಿನ್ನು ಉಭಯ ಸೈನ್ಯದೊಳಾರು
ಘನ್ನ ಯುದ್ಧಾರ್ಥ ಸ್ಥಿತರಾದ ಭಟರು
ಅವರೆಲ್ಲರಿನ್ನುಳಿಯುರೈಯು ಅದು ಕಾರಣದಿ
ಬವರದಲಿ ಸ್ಥಿತನಾಗು ವಿಳು ನೀನು

ತಸ್ಮಾತ್ತ್ವಮುತ್ತಿಷ್ಠ ಯಶೋಲಭಸ್ವ ಜಿತ್ವಾಶತ್ರೂನ್ ಭುಂಕ್ಷ್ವ
[ರಾಜ್ಯಂ ಸಮೃದ್ಧಂ
ಮಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವಸವ್ಯ
[ಸಾಚಿನ್ ೩೩

ದ್ರೋಣಂ ಚ ಭೀಷ್ಮಂಚ ಜಯದ್ರಥಂಚ ಕರ್ಣಂ ತಥಾನ್ಯಾನಪಿ
[ಯೋಧ ವೀರಾನ್
ಮಯಾ ಹತಾಂ ಸ್ತ್ವಂ ಜಹಿ ಮಾವ್ಯಥಿಷ್ಠಾ ಯುಧ್ಯಸ್ವ ಜೇತಾಸಿ
[ರಣೇ ಸಪತ್ನಾನ್ ೩೪

ಸಂಜಯ ಉವಾಚ:—

ಏತಚ್ಛ್ರುತ್ವಾ ವಚನಂ ಕೇಶವಸ್ಯ ಕೃತಾಂಜಲಿರ್ವೇಪಮಾನಃ
[ಕಿರೀಟೀ
ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ ಸಗದ್ಗದಂ ಭೀತಭೀತಃ
[ಪ್ರಣಮ್ಯ ೩೫

---

ಅರಿಗಳನೆ ಗೆದ್ದು ಕೀರ್ತಿಯ ಪಡೆದು ಹೆಚ್ಚಿದ
ವರ ರಾಜ್ಯವನೆ ಭೋಗ ಮಾಡು ನೀನು
ಎನ್ನಿಂದಲಿವರು ಹತರಾಗಿಹರು ಮೊದಲೆ ಕೇ
ಳಿನ್ನು ನೀನಿದಕೆ ನೆಪಮಾತ್ರನಾಗು
ಎನ್ನಿಂದ ಗತಪ್ರಾಣರಾದ ಭೀಷ್ಮ ದ್ರೋಣ
ಕರ್ಣ ಸೈಂಧವನು ಹಾಂಗಿನ್ನು ಕೆಲರು
ಯುದ್ಧದಲಿ ಶೂರರಾದಿವರನ್ನೆ ಗೆಲಲು ಸ
ನ್ನದ್ಧನಾಗೈ ಗೆಲ್ಲು ದುಃಖಿಸದಿರು
ರಣದೊಳಗೆ ಶತ್ರುಗಳ ಮೊತ್ತವನೆ ಗೆಲ್ಲುವೆಯೊ
ಧನುವ ಧರಿಸೇಳು ಯುದ್ಧವನೆ ಮಾಡು
೩೩-೩೪

ಅರ್ಜುನ ಉವಾಚ:—

ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ ಜಗತ್ಪ್ರಹೃಷ್ಯತ್ಯನುರಜ್ಯತೇ ಚ
ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ ಸರ್ವೇ ನಮಸ್ಯಂತಿಚ ಸಿದ್ಧ
[ಸಂಘಾಃ ೩೬

ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್ ಗರೀಯಸೇ ಬ್ರಹ್ಮಣೋಽ
[ಪ್ಯಾದಿಕರ್ತ್ರೇ
ಅನಂತ ದೇವೇಶ ಜಗನ್ನಿವಾಸ ತ್ವಮಕ್ಷರಂ ಸದಸತ್ತತ್ಪರಂ ಯತ್ ೩೭

---

ಆರ್ಯಾ

ಸಂಜಯಃ:—

ಮತ್ತೆ ಕೇಳು ಧೃತರಾಷ್ಟ್ರನೆ ಈ ಪರಿ ವಿಸ್ತರದಲಿ ಕೇಶವ ನುಡಿದಾ
ಉತ್ತಮ ವಾಕ್ಯವನಾಲಿಸಿ ಫಲ್ಗುಣ ಭಕ್ತಿಭರದಿ ಬಹು ವಿಧದಿಂದ
ಕೃತ ಅಂಜಲಿಯಿಂದಲಿ ನಡುಗುತ ನಮಿಸುತ ಗದ್ಗದ ವಾಣಿಗಳಿಂದ
ಶತಪತ್ರಾಕ್ಷಗೆ ಮರಳಿ ಮರಳಿ ನಮಿಸುತ ಭಯದಲಿ ಮತ್ತೀಗೆಂದ ೩೫

ಷಟ್ಪದಿ: ತ್ರಿಪುಟತಾಳ

ಎಲೆ ಹೃಷೀಕಪ ನಿನ್ನ ಕೀರ್ತಿಯು
ಹಲವು ಪರಿ ಕೀರ್ತಿಸಿದ ಮಾತ್ರದಿ
ಚಲಿಸಿ ಭಯದಿಂದೋಡುವರು ರಕ್ಕಸರು ದೆಸೆದೆಸೆಗೆ
ಇಳೆಯೊಳಗೆ ತವ ಡಿಂಗರಿಗರಾ
ದ್ಧಲವು ಜನರನುರಕ್ತರಾಗುವ
ಬಲು ಹರುಷವೈದುವರು ಸಿದ್ಧರ ಸಂಘ ನಮಿಸುವುದೂ ೩೬

ಸದಸದಾತ್ಮಕ ಜಗದೊಳಾವುದು
ಅಧಿಕವೋ ಅದು ನೀನು ಗುರುತರ
ಸದಯ ನೀನು ಮಹಾತ್ಮ ನಕ್ಷರನಂತ ದೇವೇಶ

ತ್ವಮಾದಿ ದೇವಃ ಪುರುಷಃ ಪುರಾಣಸ್ತ್ವಮಸ್ಯ ವಿಶ್ವಸ್ಯ ಪರಂ
[ನಿಧಾನಮ್
ವೇತ್ತಾಽಸಿ ವೇದ್ಯಂ ಚ ಪರಂ ಚ ಧಾಮ ತ್ವಯಾತತಂ ವಿಶ್ವಮನಂತ
[ರೂಪ ೩೮
ವಾಯುರ್ಯಮೋಽಗ್ನಿರ್ವರುಣಶ್ಶಶಾಂಕಃ ಪ್ರಜಾಪತಿಸ್ತ್ವಂ
[ಪ್ರಪಿತಾಮಹಶ್ಚ
ನಮೋ ನಮಸ್ತೇಽಸ್ತು ಸಹಸ್ರ ಕೃತ್ವಃ ಪುನಶ್ಚ ಭೂಯೋಽಪಿ
[ನಮೋ ನಮಸ್ತೇ ೩೯

---

ಸದ ನಿವಾಸಸ್ಥಾನ ಲೋಕಕೆ
ವಿಧಿ ಮುಖರಿಗಿಸ್ನಾದಿಕರ್ತನೆ
ಮುದದಿ ಲೋಗರು ಏನು ಕಾರಣ ನಮಿಸದಿರುತಿಹರೈ ೩೭

ನೀನೆ ವೇದ್ಯನು ಬಲ್ಲವನು ಕೇ
ಳ್ನೀನೆ ವರ ದೇವಾದಿ ದೇವನು
ನೀನೆ ಈ ಜಗಕೆಲ್ಲ ಪರಮ ನಿಧಾನನವ್ಯಯನೂ
ನೀನೆ ಪೂರ್ವದ ಪುರುಷ ನಿರುಪಮ
ನೀನೆ ಘನತರಧಾಮ ನಿನ್ನಿಂ
ದೀ ನಳಿನಜಾಂಡೆಲ್ಲ ವ್ಯಾಪ್ತವನಂತ ರೂಪಹರೇ ೩೮

*ಮಾರುತನು ಯಮಧರ್ಮ ಜ್ವಲನನು
ದಾರ ವರುಣ ಶಶಾಂಕ ಮೊದಲಾ
ದಾರು ಮೂರು ಜನ ಪ್ರಜಾಪತಿ ಶಬ್ದವಾಚ್ಯನುನೀ
ಶೌರಿ ನಿನಗೊಂದಿಸುವೆ ಸಾಸಿರ
ಬಾರಿಬಾರಿಗು ನಮೊ ನಮೊ ಕಂ
ಸಾರಿ ನಿನಗೆ ನಮೋಽಸ್ತುತೇ ನಮೊ ಎಂದನಾ ಪಾರ್ಥ ೩೯

---

*ಬಲಜ್ಞಾನ ರೂಪನಾದ ಪ್ರಯುಕ್ತ ವಾಯುಶಬ್ದವಾಚ್ಯನು ನೀನೆ.
ದೋಷದೂರನಾದ ಪ್ರಯುಕ್ತ ಯಮಶಬ್ದವಾಚ್ಯನು ನೀನೆ.

ನಮಃ ಪುರಸ್ತಾದಥ ಪೃಷ್ಠತಸ್ತೇ ನಮೋಽಸ್ತುತೇ ಸರ್ವತ ಏವ ಸರ್ವ
ಅನಂತ ವೀರ್ಯಾಮಿತ ವಿಕ್ರಮಸ್ತ್ವಂ ಸರ್ವಂ ಸಮಾಪ್ನೋಷಿ
[ತತೋಽಸಿ ಸರ್ವಃ ೪೦

ಸಖೇತಿ ಮತ್ವಾ ಪ್ರಸಭಂ ಯದುಕ್ತಂ ಹೇ ಕೃಷ್ಣ ಹೇ ಯಾದವ ಹೇ
[ಸಖೇತಿ
ಅಜಾನತಾ ಮಹಿಮಾನಂ ತವೇದಂ ಮಯಾಪ್ರಮಾದಾತ್ಪ್ರಣಯೇನ
[ವಾಪಿ ೪೧

---

ಷಟ್ಪದೀ ರೂಪಕತಾಳ

ನೀನೆ ಸರ್ವಾಕಾರನಾಗಿ ಸರ್ವತ್ರದಲಿ
ನೀನೆ ವ್ಯಾಪಿಸಿ ಇರುವ ಕಾರಣದಿ ಆ ಸರ್ವ
ನೀನೆಂದು ಖ್ಯಾತನಾಗಿರುವಿ ತಸ್ಮಾದನಂತಮಿತ ವಿಕ್ರಮನೊ
[ನೀನು
ನೀನೆ ಕಡೆಯಿಲ್ಲದಾ ವೀರ್ಯಯುತ ನಿನಗೋಸ್ಕ
ರಾನು ವಂದಿಸುವೆ ಹಿಂಭಾಗ ಮುಂಭಾಗದಲಿ
ಈ ನಿನಗೆ ಸರ್ವ ದೆಸೆಗಳಲಿ ವಂದಿಸುವೆನ್ಯೈ ತೇ ನಮಸ್ತೇ
[ನಮೋಸ್ತು ೪೦

ಘನ್ನ ಪ್ರಮಾದ ದೆಸೆಯಿಂದ ಪ್ರಣಯದಿ ಮರಳಿ
ನಿನ್ನಮಿತ ಪೂರ್ವೋಕ್ತ ಈ ಮಹಾತ್ಮ್ಯಯನರಿಯ
ದೆನ್ನಿಂದ ಸಖನೆಂದು ತಿಳಿದು ಹೇ ಕೃಷ್ಣ, ಹೇ ಯಾದವನೆ
[ಮಿತ್ರನೆ

---

ಜಗತ್ತನ್ನು ನಿಯಮನ ಮಾಡುವನಾದ ಪ್ರಯುಕ್ತ ಅಗ್ನಿಶಬ್ದವಾಚ್ಯನು ನೀನೆ.
ಭಕ್ತರನ್ನು ಸ್ವೀಕಾರ ಮಾಡುವನಾದ ಪ್ರಯುಕ್ತ ವರುಣಶಬ್ದವಾಚ್ಯನು ನೀನೆ.
ಅತಿ ಸುಖ ಚಿನ್ಹಿತನಾದ ಪ್ರಯುಕ್ತ ಶಶಾಂಕಶಬ್ದವಾಚ್ಯನು ನೀನೆ.
ಪ್ರಜಾಪಾಲಕನಾದ ಪ್ರಯುಕ್ತ ಪ್ರಜಾಪತಿ ಶಬ್ದವಾಚ್ಯನು ನೀನೆ.
ಜಗತ್ತಿಗೆ ಮೂಲಕಾರಣನು ನೀನೆ,—ಪ್ರಪಿತಾಮಹನು ನೀನೆ.

ಯಚ್ಚಾವಹಾಸಾರ್ಥ ಮಸತ್ಕೃತೋಽಸಿ ವಿಹಾರಶಯ್ಯಾಸನ
[ಭೋಜನೇಷು
ಏಕೋಽಥವಾಪ್ಯಚ್ಯುತ ತತ್ಸಮಕ್ಷಂ ತತ್ ಕ್ಷಾಮಯೇ ತ್ವಾಮಹ
[ಮಪ್ರಮೇಯಮ್ ೪೨

ಪಿತಾಽಸಿ ಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಸ್ಯ ಗುರು
[ರ್ಗರೀಯಾ&
ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇಽಪ್ಯ
[ಪ್ರತಿಮಪ್ರಭಾವ ೪೩

---

ಎನ್ನುತಲಿ ಸಲಿಗೆಯಿಂದಲಿ ಆವನಾಡಿದೆನೊ
ಇನ್ನಾವು ದಪಹಾಸ ಗೋಸ್ಕರ ಅಸತ್ಕಾರ
ವನ್ನೆ ಗೈದೆನೊ ಆಸನ ಶಯನ ಭೋಜನ ವಿಹಾರ ಕಾಲದಲಿ
[ನಿನಗೆ ೪೧

ಅಲ್ಲಥವ ನೀನೊಬ್ಬನಿದ್ದಾಗ ನುಡಿದ ವಚ
ನೆಲ್ಲವನು ಮರಳಿ ಬಹು ಜನರ ಮುಂದಾಡಿರ್ದ
ವೆಲ್ಲವನು ಕುರಿತಪ್ರಮೇಯ ನಿನ್ನಗೆ ನಾನು ಕ್ಷಮಿಸೆಂದು
[ಬೇಡಿಕೊಂಬೆ

ಬಲ್ಲಿದನು ನೀ ಚರಾಚರ ಜೀವರಾಶಿಗಳಿ
ಗೆಲ್ಲ ಪಿತನಾಗಿರುವೆ ಜಗಕೆ ಪೂಜ್ಯರಿಗೆ ನೀ
ನೆಲ್ಲರೊಳು ಗುರುತರದ ಗುರುವೆಂದೆನಿಸಿಕೊಂಬ ಅಮಿತ
[ಸದ್ಗುಣ ಪೂರ್ಣನೆ ೪೨

ಶ್ಲೋಕ:—

ಮೂರು ಲೋಕದಿ ನಿನ್ನ ಸಮರಿಲ್ಲ ಕೇಳೊ
ಶೌರಿ ಅನ್ಯರು ಅಧಿಕರೆತ್ತಣದು ಹೇಳೊ
ಮೀರಿದಪ್ರತಿಮಪ್ರಭಾವ ನೀನೆಂದೂ
ಸಾರುವೆನೊ ಅದು ಕಾರಣದಲಿ ನಾನಿಂದೂ

ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ ಪ್ರಸಾದಯೇ ತ್ವಾಮಹ
[ಮೀಶಮೀಡ್ಯಂ
ಪಿತೇವ ಪುತ್ರಸ್ಯ ಸಖೇವ ಸಖ್ಯುಃ ಪ್ರಿಯಃ ಪ್ರಿಯಾಯಾರ್ಹಸಿ
[ದೇವ ಸೋಢುಮ್ ೪೪

ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ ಭಯೇನ ಚ ಪ್ರವ್ಯ
[ಥಿತಂ ಮನೋ ಮೇ
ತದೇವ ಮೇ ದರ್ಶಯ ದೇವರೂಪಂ ಪ್ರಸೀದ ದೇವೇಶ ಜಗನ್ನಿ
[ವಾಸ ೪೫

---

ಗುಣನಿಧಿಯೆ ಈಶನೀಡ್ಯನೆ ನಿನ್ನನೆಂಬೆ
ಮಣಿದು ಕಾಯವನೆ ನಮಿಸುತ ಬೇಡಿಕೊಂಬೆ
ಸುತನ ಅಪರಾಧವನೆ ಪಿತ ಸಹಿಸುವಂತೆ
ಸತಿಯು ಅಪರಾಧವನೆ ಪತಿ ಸಹಿಸುವಂತೆ

ಸಂಗತಿಗ ನಪರಾಧ ಸಖ ಸಹಿಸುವಂತೆ
ಮಂಗಳಾತ್ಮಕ ಸಹಿಸಲರ್ಹ ನೀನಂತೆ
ಮೊದಲೆಂದು ಕಾಣದದ್ಭುತ ನಿನ್ನ ರೂಪ
ವಿವ ಕಂಡು ಹರುಷಯುತನಾದೆ ಹೇ ಶ್ರೀಪಾ

ಎನ್ನ ಮನ ಭಯದಿ ಪ್ರವ್ಯಥಿತವಾಗಿಹುದೋ
ಮುನ್ನಿನಿರವನೆ ಎನಗೆ ತೋರಿಸಲಿ ಬಹುದೋ
ದೇವದೇವ ಜಗನ್ನಿವಾಸ ಪ್ರಸೀದ
ಭಾವಜನ ಪಿತನೆ ನಂಬಿದೆನೊ ಹೇ ಶ್ರೀದಾ

ವರ ಕಿರೀಟವ ಗದೆಯು ಚಕ್ರವನೆ ಧರಿಸಿ
ಮೆರೆವ ಮುನ್ನಿನ ರೂಪ ನೋಡೆ ನಾ ಬಯಸಿ
ಇಚ್ಛಿಪೆ ಸಹಸ್ರಭುಜ ವಿಶ್ವ ಮೂರುತಿಯೆ
ಅಚ್ಯುತನೆ ಭಕ್ತವತ್ಸಲ ಎನ್ನ ದೊರೆಯೆ

ಕಿರೀಟಿನಂ ಗದಿನಂ ಚಕ್ರಹಸ್ಥಮಿಚ್ಛಾಮಿ ತ್ವಾಂ ದ್ರಷ್ಟುಮಹಂ
[ತಥೈವ
ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವ ವಿಶ್ವ
[ಮೂರ್ತೇ ೪೬

ಶ್ರೀ ಭಗವಾನುವಾಚ:—

ಮಯಾ ಪ್ರಸನ್ನೇನ ತವಾರ್ಜುನೇದಂ ರೂಪಂ ಪರಂ ದರ್ಶಿತ
[ಮಾತ್ಮ ಯೋಗಾತ್
ತೇಜೋಮಯಂ ವಿಶ್ವಮನಂತಮಾದ್ಯಂ ಯನ್ಮೇತ್ವದನ್ಯೇನ
[ನದೃಷ್ಟ ಪೂರ್ವಂ ೪೭

---

ಮುನ್ನಿನಂದದಿ ಚತುರ್ಭುಜ ರೂಪದಿಂದ
ಎನ್ನ ಕಂಗಳಿಗೆ ಗೋಚರನಾಗು ಎಂದ
ಈ ಪರಿಯ ಬಿನ್ನಪವ ಕೇಳಿ ಗೋವಿಂದಾ
ಶ್ರೀ ಪತಿಯು ನುಡಿದ ಅತಿಶಯ ಕರುಣದಿಂದಾ ೪೩-೪೭

ಪದ ಅಟತಾಳ

ಎನ್ನನಾದಿ ತೇಜಃಪುಂಜ ಘನ್ನಾ ಈ ವಿಶ್ವ ರೂಪವು
ನಿನ್ನೊಳನುಗ್ರಹದೀ ಆತ್ಮಯೋಗದ್ವೆಸೆಯಿಂದ
ಇನ್ನೂ ನಿನಗೆ ತೋರಿದೆನ್ನೈ ಅನ್ಯಾರಿಂದ ಈ ರೂಪಾವು
ನಿನ್ನಾ ಹೊರತ್ಯಾಯಾರ್ರೂ ಮುನ್ನೆ ನೋಡಲಿಲ್ಲವೊ ೧

ನಾನು ಯಜ್ಞಾಧ್ಯಯನದಿಂದೂ ಕಾಣಿಸುವನಲ್ಲ ಅರ್ಜು
ನಾನೆ ವಿವಿಧ ದಾನಾದಿಂದೂ ಉಗ್ರ ತಪದಿಂದೂ
ನಾನಾ ಕರ್ಮದಿಂದೂ ಜನಕೆ ಕಾಣಿಸುವನಲ್ಲೀ ವಿಧದ
ಜ್ಞಾನಾನಂದಮಯದ ರೂಪವನ್ನೆ ನೋಡಲು ೨

ನ ವೇದ ಯಜ್ಞಾಧ್ಯಯನೈರ್ನ ದಾನೈರ್ನ ಚ ಕ್ರಿಯಾಭಿರ್ನ
[ತಪೋಭಿರುಗ್ರೈಃ
ಏವಂ ರೂಪಶ್ಶಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ
[ಕುರುಪ್ರವೀರ ೪೮
ಮಾ ತೇ ವ್ಯಥಾ ಮಾ ಚ ವಿಮೂಢ ಭಾವೋ ದೃಷ್ಟ್ವಾ ರೂಪಂ
[ಘೋರ ಮೀದೃಙ್ಮಮೇದಮ್
ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ ತ ದೇವ ಮೇ ರೂಪ
[ಮಿದಂ ಪ್ರಪಶ್ಯ ೪೯

ಸಂಜಯ ಉವಾಚ—

ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ ಸ್ವಕಂ ರೂಪಂ
[ದರ್ಶಯಾಮಾಸ ಭೂಯಃ
ಆಶ್ವಾಸಯಾಮಾಸ ಚ ಭೀತಮೇನಂ ಭೂತ್ವಾ ಪುನಸ್ಸೌಮ್ಯ
[ವಪುರ್ಮಹಾತ್ಮಾ ೫೦

---

ನರಲೋಕಾದಲ್ಲಿ ನಿನ್ಹೊರತು ಕುರುವೀರಾನೆ ಶಕ್ಯವನ್ಯಾ
ನರರಿಂದಾಹದಲ್ಲಾವೆನ್ನ ಈ ವಿಧಾವಾದಾ
ವರ ಘೋರಾ ಈ ರೂಪಾವನ್ನೆ ನೋಡೀ ನಿನಗೆ ಮನದೀ ವ್ಯಥೆ ಬ್ಯಾ
ಡುರುತರ ವಿಮೂಢ ಭಾವಾನೈದ ಬ್ಯಾಡವೊ ३
ಮರಳಿ ಪ್ರೀತಾ ಮನದೀ ಭಯವಾ ಜರಿದೂ ಇಂದಿರೇಶ ವಿಠಲ
ನಿರವಾ ಕಾಣಲಿಚ್ಛೈಸೀ ನೀ ಬೇಡಿದಂದಾದೀ
ದರವಂಬುಜವಾಗದೆಯ ಅರವ ಧರಿಸಿದಾ ಚತುರ್ಭುಜುಳ್ಳಾ
ಪರಮ ಸೌಮ್ಯ ರೂಪವನ್ನೆ ನೋಡು ಯೆಂದನು ೪
೪೭-೪೯

ಷಟ್ಪದೀ ರೂಪಕತಾಳ

ಹೀಗೆಂದು ವಾಸುದೇವನು ಅರ್ಜುನನ ಕುರಿತು
ಆಗೆವನು ಬಳಿಕ ಸೌಮ್ಯದ ಚತುರ್ಭುಜಯುಕ್ತ
ನಾಗಿರುವ ತನ್ನ ರೂಪವನೆ ತೋರಿಸಿ ಬಳಿಕ ಭೀತನಾದ
[ರ್ಜುನನನೂ

ಅರ್ಜುನ ಉವಾಚ:—

ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ
ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ೫೧

ಶ್ರೀ ಭಗವಾನುವಾಚ:—

ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿಯನ್ಮಮ
ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನ ಕಾಂಕ್ಷಿಣಃ ೫೨

---

ಭಾಗವತರರಸ ಸೌಮ್ಯದ ದೇಹಯುತನು ತಾ
ನಾಗಿ ಸಂತೋಷ ಕೊಡುತಲಿ ಸಮಾಧಾನವನು
ಯೋಗಿಗಳಿಗೊಡೆಯ ಮಾಡಿದನು ಧೃತರಾಷ್ಟ್ರ ಭೂಪಾಲ
[ಕೇಳೆಂದನಾಗಾ ೫೦

ಷಟ್ಪದೀ ತ್ರಿಪುಟತಾಳ

ಎಲೆ ಜನಾರ್ದನ ಸೌಮ್ಯವಾಗಿಹ
ಚೆಲುವ ಮಾನುಷ ಸದೃಶ ತವ ನಿ
ರ್ಮಲದ ಈ ರೂಪವನೆ ಕಂಡು ಸಚಿತ್ತ ಯುತನಾದೆ
ತಿಳಿದ-ದಂತಃಕರಣವೀಗಲೆ
ನೆಲೆಗೆ ನಿಂದುದು ಪೂರ್ವದಂದದಿ
ಚಲಿಸದಿರುವ ಸ್ವಭಾವವೈದಿದೆನೆಂದ ಫಲ್ಗುಣನು ೫೧

ಎಲೆ ಧನಂಜಯ ಎನ್ನ ರೂಪವ
ನೆಲೆಸು ಕಾಣಲು ಶಕ್ಯವಲ್ಲದ
ಲಲಿತವಾದೀ ಎನ್ನ ರೂಪವ ಕಂಡೆ ನೀನೆಂದೂ
ಹಲವು ನಿರ್ಜರರೀ ವಿಧದ ನಿ
ರ್ಮಲ ಸುರೂಪವ ನೋಡಲೋಸುಗ
ಹಲವು ಯತ್ನದಿ ನಿರುತ ಕಾಂಕ್ಷಿಸುತಿಹರು ಕೇಳೆಂದ ೫೨

ನಾಹಂ ವೇದೈರ್ನತಪಸಾ ನದಾನೇನ ನ ಚೇಜ್ಯಯಾ
ಶಕ್ಯ ಏವಂ ವಿಧೋದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ೫೩

ಭಕ್ತ್ಯಾತ್ವ ನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ
ಜ್ಞಾತುಂ ದ್ರಷ್ಟುಂಚ ತತ್ತ್ವೇನ ಪ್ರವೇಷ್ಟುಂಚ ಪರಂತಪ ೫೪

ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಸ್ಸಂಗ ವರ್ಜಿತಃ
ನಿರ್ವೈರಸ್ಸರ್ವ ಭೂತೇಷು ಯಸ್ಸಮಾಮೇತಿ ಪಾಂಡವ ೫೫

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ವಿಶ್ವರೂಪದರ್ಶನಯೋಗೋನಾಮ**
ಏಕಾದಶೋಽಧ್ಯಾಯಃ

---

ಪ್ರಕಟಯನ್ನ ಸುರೂಪವನು ನೀ
ವಿಕಳನಾಗದೆ ನೋಡಿದಂದದಿ
ಅಕುಟಿಲಾತ್ಮನ ಈ ವಿಧದ ವರ ವಿಶ್ವರೂಪವನೆ
ಸಕಲ ವೇದಾಧ್ಯಯನದಿಂದಲು
ಸಕಲ ದಾನ ತಪಂಗಳಿಂದಲು
ಸಕಲ ಯಜ್ಞಗಳಿಂದ ಕಾಣಲು ಶಕ್ಯವಲ್ಲೆಂದ ೫೩

ನಿರುತ ನನ್ನ ಸುಭಕ್ತಿಯಿಂದಲಿ
ಸ್ಮರಿಪರಿಗೆ ನಿಜದಿಂದ ನೋಡಲು
ಅರಿಯುವಡೆ ಮದ್ದೇಹದಲಿ ಹೊಗುವೊಡೆ ಪರಂತಪನೆ
ಪರಮ ಶಕ್ಯನೊ ಈ ವಿಧದ ನಾ
ನುರುತರನೊ ಕೇಳೆನ್ನಗೋಸುಗ
ನಿರುತ ಕರ್ಮಗಳನ್ನೆ ಮಾಡುತ ಪರಮನೆಂದೆನ್ನ ೫೪

ಅರಿತು ಕರ್ಮಜ ಫಲದಿ ಸಂಗವ
ಜರಿದು ಪ್ರಾಣಿಗಳೆಲ್ಲರೊಳು ಬಹು
ಕರುಣದಲಿ ವೈರವನುಳಿದು ಮದ್ಭಕ್ತನಾದವನು
ಧರೆಯೊಳಾವನೊ ಅವನು ಎನ್ನಯ
ಇರವನೈದುವ ಪಾಂಡವನೆ ಈ
ಪರಿಯ ತಿಳಿಯೆಂದಿಂದಿರಾಪತಿ ವಿಠ್ಠಲನು ನುಡಿದಾ ೫೫

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ "ಗೀತಾರಂಜನಾ"ಖ್ಯ ಗ್ರಂಥೇ
**ವಿಶ್ವರೂಪದರ್ಶನಯೋಗೋನಾಮ**
ಏಕಾದಶೋಽಧ್ಯಾಯಃ



ಹರಿಃ ಓಂ

# ಹನ್ನೆರಡನೆಯ ಅಧ್ಯಾಯ

---

ಅರ್ಜುನ ಉವಾಚ:—

ಏವಂ ಸತತ ಯುಕ್ತಾಯೇ ಭಕ್ತಾಸ್ತ್ವಾಂ ಪರ್ಯುಪಾಸತೆ
ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇಯೋಗವಿತ್ತಮಾಃ ೧

ಶ್ರೀ ಭಗವಾನುವಾಚ:—

ಮಯ್ಯಾವೇಶ್ಯ ಮನೋಯೇನಾಂ ನಿತ್ಯಯುಕ್ತಾ ಉಪಾಸತೇ
ಶ್ರದ್ಧಯಾ ಪರಯೋಪೇತಾಸ್ತೇಮೇ ಯುಕ್ತತಮಂ ಮತಾಃ ೨

---

ಷಟ್ಪದೀ ತ್ರಿಪುಟತಾಳ

ಅರ್ಜುನ:—

ಈ ವಿಧ ನಿರಂತರದಿ ಭಕ್ತಿಯ
ಭಾವದಿಂದಲಿ ನಿನ್ನ ಭಜಿಸುವ
ನಾವನೋ ಮೇಣಾ್ನಶವಿರದವ್ಯಕ್ತನಾಮಕಳಾ
ದೇವ ನಿನ್ನರಸಿಯನೆ ಭಜಿಸುವ
ನಾವನೋ ಈ ದ್ವಿವಿಧರೊಳು ಮ
ತ್ತಾವನುತ್ತಮ ಯೋಗವಿದ ಹೇಳೆಂದನಾ ಪಾರ್ಥ ೧

ಭಗವಾನ್:—

ನಿರುತ ವರ ಸದ್ಭಕ್ತಿಯುಕ್ತನು
ಇರಿಸಿ ಮನವೆನ್ನಲ್ಲಿ ಆವನು
ಧರೆಯೊಳಗೆ ಭಜಿಸುವನೊ ಎನ್ನನು ಅವನು ಯುಕ್ತತಮ

ಯೇತ್ವಕ್ಷರ ಮನಿರ್ದೇಶ್ಯ ಮವ್ಯಕ್ತಂ ಪರ್ಯುಪಾಸತೇ
ಸರ್ವತ್ರಗಮಚಿಂತ್ಯಂಚ ಕೂಟಸ್ಥ ಮಚಲಂ ಧ್ರುವಂ ೩

ಸಂ ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ
ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತ ಹಿತೇರತಾಃ ೪

ಕ್ಲೇಶೋಽಧಿಕ ತರಸ್ತೇಷಾಮವ್ಯಕ್ತಾಸಕ್ತ ಚೇತಸಾಂ
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ೫

---

ನರನು ಸಮ್ಮತನೆನಗೆ ಕೇಳ್ಳೈ
ಮರಳಿ *ಸರ್ವತ್ರಗಮಚಿಂತ್ಯ
ಕ್ಷರ ಅಚಲ ಕೂಟಸ್ಥ ಧ್ರುವ ಅವ್ಯಕ್ತ ನಿರ್ದಿಶ್ಯಾ
ಈ ವಿಧದ ಲಕ್ಷ್ಮಿಯನೆ ಲೋಕದೊ
ಳಾವ ಪುರುಷರು ಕರಣ ಗ್ರಾಮವ
ಭಾವದಿಂ ನಿಯಮಿಸುತ ಸರ್ವತ್ರದಲಿ ಸಮಳೆಂದೂ
ಭಾವಿಸುತ ಭೂತಂಗಳೆಲ್ಲರೊ
ಳೀ ವಿಧವ ಹಿತದಲ್ಲಿ ರತ ನೀ
ದೇವಿಯನೆ ಭಜಿಸುವನೊ ಆ ನರನೆನ್ನ ನೈದುವನೊ ೨-೩-೪

**ಸು ಳಾ ದಿ**

**ತ್ರಿ ಪು ಟ ತಾ ಳ**

ಹರಿಭಕ್ತರಲ್ಲದೆ ಹರಿಯ ಪೂಜಿಸದಲೆ ಹರಿ ಸರ್ವೋತ್ತಮನೆಂಬಾ
ದರಿಯಾದೆ ಮಾಡುವ ಸಿರಿಯ ಉಪಾಸನೆಯಿಂದಾಳಾದೇವಿಯು

---

*ಸರ್ವತ್ರಗಂ = ಸರ್ವತ್ರವ್ಯಾಪ್ತಳಾದಂಥ, ಅಚಿಂತ್ಯ (ಅನಿರ್ದೇಶ್ಯ) = ಅನೇಕ ಗುಣವುಳ್ಳವಳಾದ ಪ್ರಯುಕ್ತ ಹೀಗೇ ಎಂದು ಪೂರ್ತಿಯಾಗಿ ತಿಳಿಯಲಿಕ್ಕೂ, ಹೇಳಲಿಕ್ಕೂ ಬಾರದಂಥ, ಕೂಟಸ್ಥ = ಅವ್ಯಾಕೃತ ಆಕಾಶದಲ್ಲಿ ನಿಯಾಮಕಳಾಗಿರುವಂಥ, ಅಚಲಂ = ತನ್ನ ಪದದ ದೆಸೆಯಿಂದ ಎಂದಿಗೂ ಭ್ರಷ್ಟಳಾಗದಂಥ, ಧ್ರುವಂ = ವಿಕಾರ ರಹಿತಳಾದಂಥ, ಅವ್ಯಕ್ತಂ = ಜಡಪ್ರಕೃತಿಗೆ ಅಭಿಮಾನಿಯಾದಂಥ—ಲಕ್ಷ್ಮೀ ದೇವಿಯನ್ನು.

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ೬

---

ಭರಿತ ಕೋಪಾದಿ ಶಪಿಸುವಳು ಕ್ಲೇಶಾಧಿಕ
ನಿರಯಾದಿಗಳಲಿ ಭೋಗಿಸುವುದದಕೆ ಫಲ
ಹರಿ ಸರ್ವೋತ್ತಮನೆಂಬಾದರಿತು ಲೋಕದೊಳೆನ್ನ
ಶರಣಮೋಳ್ಪರಿಯಿಂದ ಸಹಾ ಎನ್ನ ಧ್ಯಾನವ
ನಿರುತ ಮಾಡದಲೆ ಪೃಥಕ್ ಅವ್ಯಕ್ತೋಪಾಸ
ಕರಿಗೆ ತದಾನುಗ್ರಹದಿ ಬಹು ಕಾಲಕೆ
ಹರಿಯು ಅಚ್ಛಿದ್ರೋಪಾಸನೆಯ ಕೊಡುವಳು ಬಳಿಕ
ಹರಿಯು ಸ್ವಹೃದಯಾದಿ ಕಂಡ ಬಳಿಕ ಮೋಕ್ಷ
ದೊರಕುವುದವ್ಯಕ್ತೋಪಾಸನೆಯಲಿ ಕೇಳು
ನಿರುತ ಆಸಕ್ತಿಯನುಳ್ಳ ಮಾನವರಿಗೆ
ಪರನು ಕ್ಲೇಶಾಧಿಕ ಬಹುದಾದ ಕಾರಣ
ಧರೆಯೊಳಾರಿಗು ಅವ್ಯಕ್ತೋಪಾಸನದ್ವಾರಾ
ವರ ಎನ್ನ ಪ್ರಾಪ್ತಿ ಮಾರ್ಗವು ದುಃಖದಿಂದಲೆ
ದೊರೆವುದು ಎನ್ನಿಂದಿರೇಶಾ ವಿಠಲನೆಂದೂ
ಅರಿತುಪಾಸನೆಯ ಮಾಳ್ಪರಿಗತೀ ಸುಲಭಾವೊ ೫

ಅ ಟ ತಾ ಳ

ಎನ್ನಲ್ಲಿ ಬಹು ವಿಧ ಕರ್ಮಗಳರ್ಪಿಸಿ
ಇನ್ನು ಮನುಜನಾವಾ ಮತ್ಪರನಾಗಿ ಅ
ನನ್ಯವಾಗಿಹ ವರಯೋಗದಿಂದನುದಿನ
ಎನ್ನ ಧ್ಯಾನಿಸಿ ಉಪಾಸನೆಯು ಮಾಡುವನೋ ಕೇ
ಳೆನ್ನಲೀ ನೆರೆಸಿದ ಭಕ್ತಿವುಳ್ಳವಂಗೆ
ಇನ್ನತಿ ಮೃತ್ಯು ಸದೃಶವಾಗಿ ಕೆಡಿಸುವ

ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್
ಭವಾಮಿ ನಚಿರಾತ್ಪಾರ್ಥ ಮಯ್ಯಾವೇಶಿತ ಚೇತಸಾಮ್ ೭

ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ೮

ಅಥಚಿತ್ತಂಸಮಾಧಾತುಂ ನಶಕ್ನೋಷಿ ಮಯಿಸ್ಥಿರಂ
ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ೯

ಅಭ್ಯಾಸೇऽಪ್ಯಸಮರ್ಥೋऽಸಿ ಮತ್ಕರ್ಮ ಪರಮೋಭವ
ಮದರ್ಥಮಪಿ ಕರ್ಮಾಣಿ ಕುರ್ವನ್‌ಸಿದ್ಧಿ ಮವಾಪ್ಸ್ಯಸಿ ೧೦

---

ಘನ್ನ ಸಂಸಾರ ಸಾಗರದಿಂದ ಉಧೃತಿ
ಯನ್ನೆ ಮಾಡುವನಾಹೆ ನಾ ಬೇಗದಿ ತಸ್ಮಾ
ತೆನ್ನಲ್ಲಿ ಮನವನೆ ಸ್ಥಾಪಿಸು ಬುದ್ಧಿಯು
ಎನ್ನಲ್ಲಿ ಹೊಗಿಸ್ಯೆಯ ಬಳಿಕ ಸಂಶಯವಿಲ್ಲ
ವೆನ್ನಲಿ ನೀ ವಾಸಾ ಮಾಡುವೆಯೋ ಮನ
ವೆನ್ನಲ್ಲಿ ಸ್ಥಿರದಿಂದಾ ಸ್ಥಾಪಿಸಲೋಸುಗ
ನಿನ್ನಿಂದಾ ಸಾಧ್ಯವಿಲ್ಲದ ಪಕ್ಷದಿ ಕೇಳೋ
ಇನ್ನು ಅಭ್ಯಾಸಯೋಗದಿ ಕ್ರಮದಿಂದ ನೀ
ಎನ್ನಾ ಜ್ಞಾನವನ್ನೈದೂವುವಕೆ ಇಚ್ಛಿಸು ಗುಣ
ಪೂರ್ಣಾ ಇಂದಿರೇಶ ವಿಠಲನಾದಯ ಭಲು
ನಿನ್ನಲಿ ಆಗುವುದಿನ್ನು ಫಲ್ಗುಣ ಕೇಳೊ ೭-೯

ಧ್ರು ವ ತಾ ಳ

ಮರಳಿ ಅಭ್ಯಾಸಕೆ ಸಮರ್ಥನಾಗದೆ ಹೋದ್ಯಾ
ನಿರುತ ಮತ್ಕರ್ಮ ಪರಮನಾಗೂ ನೀನು, ಅರ್ಜುನ

ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ
ಸರ್ವ ಕರ್ಮ ಫಲತ್ಯಾಗಂ ತತಃ ಕುರುಯಾತಾತ್ಮವಾನ್ ೧೧

ಶ್ರೇಯೋಹಿ ಜ್ಞಾನಮಭ್ಯಾಸಾತ್ ಜ್ಞಾನಾತ್ ಧ್ಯಾನಂ ವಿಶಿಷ್ಯತೇ
ಧ್ಯಾನಾತ್ಕರ್ಮ ಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಂ ೧೨

---

ಪರಮ ಸತ್ಕರ್ಮಗಳನೆ ಮತ್ಪ್ರೀತ್ಯರ್ಥಾಚರಿಸು
ತಿರಲು ಸಿದ್ಧಿಯನೈದುವೆಯೋ ನೀ ಕೇಳು ಮತ್ತು
ವರ ಮದ್ಯೋಗವಾಶ್ರೈಸಿ ಕರ್ಮ ಮಾಡಲು ನೀನು
ಮರಳಿದಕೆ ಶಕ್ತನಲ್ಲದಿದ್ದ ಪಕ್ಷದಿ ಬಳಿಕ
ಹರಿ ಮಾಡಿಸುವನೆಲ್ಲ ಕರ್ಮ ಸ್ವಾತಂತ್ರ್ಯವೆನಗೆ
ಇರದ ಕಾರಣವದರ ಫಲಗಳಿಗೆಲ್ಲ ನಾನು
ಅರಹನಲ್ಲವೆನುತ ಪೂರ್ವೋಕ್ತದಂತೆ ಮರ್ಮ
ವರಿತು ಈ ವಿಧದಿ ಮನವ ಸ್ಥಿರವಾಗಿ ನಿಯಮಿಸುತ
ಪರಿಪರಿ ಕರ್ಮಜನ್ಯ ಫಲವಾಪೇಕ್ಷಿಸದಲೆ
ಜರಿದು ತತ್ಫಲವ ತ್ಯಾಗವನ್ನೆ ಮಾಡೈಯು ಮತ್ತು
ಕುರುನಂದನನೆ ಕೇಳು ಸಮ್ಯಕ್ ಜ್ಞಾನಾವಿಲ್ಲದ
ನರರಿಂದ ಮಾಳ್ಪ ಧ್ಯಾನಯೋಗಾಭ್ಯಾಸದಕಿಂತ
ಹರಿಗುಣ ಜ್ಞಾನಶ್ರೇಷ್ಠ, ಜ್ಞಾನದಕಿಂತ ಧ್ಯಾನ
ವರವೊ ತಧ್ಯಾನಕ್ಕಿಂತ ಕರ್ಮಜ ಫಲಗಳನ್ನೆ
ಪರಿಹರಿಪುದು ಶ್ರೇಷ್ಠ ಅದ ಬಿಟ್ಟ ಬಳಿಕ ಮುಕ್ತಿ
ದೊರಕುವುದೈಯು ಕ್ರಮದಿಂದಿನ್ನು ಕೇಳಿಲೊ ಪಾರ್ಥ
ಸರುವ ಪ್ರಾಣಿಗಳೊಳು ದ್ವೇಷಗಳಳಿದು ಜನಕೆ
ಪರಮಾಪ್ತ ಮಿತ್ರನಾಗಿ ಚರಿಸುತ್ತನಾಥರಾದ
ಪರಿಪರಿ ಜನರ ಕಷ್ಟ ಕಂಡು ಸಂತೋಷಿಸದೆ
ಕರುಣವುಳ್ಳವ ವಿಗತ ಮಮಕಾರ ಅಹಂಕಾರ
ಜರಿದು ಸುಖದುಃಖ ನಿತ್ಯವಲ್ಲವೆಂದೆನುತಲಿ

ಅದ್ವೇಷ್ಟ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ
ನಿರ್ಮಮೋ ನಿರಹಂಕಾರಸ್ಸಮದುಃಖ ಸುಖಃ ಕ್ಷಮಿ ೧೩
ಸಂತುಷ್ಟಸ್ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ
ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಸ್ಸಮೇ ಪ್ರಿಯಃ ೧೪
ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚಯಃ
ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಸ್ಸಚಮೇ ಪ್ರಿಯಃ ೧೫
ಅನಪೇಕ್ಷ ಶ್ಶುಚಿರ್ದಕ್ಷ ಉದಾಸೀನೋ ಗತವ್ಯಥಃ
ಸರ್ವಾರಂಭ ಪರಿತ್ಯಾಗೀ ಯೋಮದ್ಭಕ್ತಸ್ಸಮೇ ಪ್ರಿಯಃ ೧೬

---

ಅರಿತು ಸಮವೆಂದು ಭಾವಿಸುತಲಿ ಕ್ಷಮಾಗುಣದಿಂದ
ಭರಿತ ಸಂತುಷ್ಟ ನಿಯಮಿತಾತ್ಮ ಧೃಢನಿಶ್ಚಯನು
ನಿರುತ ಎನ್ನಲ್ಲಿ ಅರ್ಪಿಸಿದ ಮನೋಬುದ್ಧಿಯುಳ್ಳ
ವರ ಯೋಗಿ ಯಾರೋ ಅವನು ಮದ್ಭಕ್ತನೆನಗೆ ಪ್ರಿಯನೊ
ಮರಳಿ ಕೇಳಾವನಿಂದ ಲೋಗರು ಹೆದರದಿಹರೊ
ಧರೆಯೊಳು ಲೋಗರಿಂದ ಹೆದರನಾವನೊ
ಹರ್ಷಾಮರ್ಷ ಭಯದಿಂದುಚಿತ ಕ್ಷೋಭದಿಂ ಮುಕ್ತನಾದ
ಪುರುಷನಾವನೊ ಅವನು ಎನಗತಿ ಪ್ರಿಯನು ಕಾಣೊ
ಶರಣರ ಪಾಲ, ಇಂದಿರೇಶ ವಿಠಲ ನಾನೆ
ಪರಿಪಾಲಿಸುವೆ ಕಾಣೊ ಈ ವಿಧ ಭಕ್ತರನ್ನು ೧೦-೧೫

ಆದಿತಾಳ

ಅನುದಿನ ದುರ್ವಿಷಯಗಳ ಅಪೇಕ್ಷೆಯ
ಹಣಿದತಿ ಶುಚಿದಕ್ಷೋದಾಸೀನ ವಿಷಯದಿ
ಘನ ವ್ಯಥೆ ವರ್ಜಿತನಾಗಿ ಸರ್ವಾರಂಭವನು
ನಾನೆ ಮಾಡುವೆನೆಂಬಭಿಮಾನವ ಹಣಿದಾವನಾ
ವನೋ ಅವನೆನ್ನ ಭಕ್ತನು ಎನಗೆ ಪ್ರಿಯನೊ ಇಂದಿರೇಶ ವಿಠಲ
ನಾನೀ ಮನುಜಗೆ ಹೃದಯದಿ ಗೋಚರನಾಹೆನೊ ೧೬

ಯೋ ನಹೃಷ್ಯತಿ ನದ್ವೇಷ್ಟಿ ನಶೋಚತಿ ನಕಾಂಕ್ಷತಿ
ಶುಭಾಶುಭ ಪರಿತ್ಯಾಗಿ ಭಕ್ತಿಮಾನ್ ಯಸ್ಸಮೇ ಪ್ರಿಯಃ ೧೭

ಸಮಶ್ಶತ್ರೌಚ ಮಿತ್ರೇಚ ತಥಾ ಮಾನಾಪಮಾನಯೋಃ
ಶೀತೋಷ್ಣ ಸುಖದುಃಖೇಷು ಸಮಸ್ಸಂಗ ವಿವರ್ಜಿತಃ ೧೮

ತುಲ್ಯ ನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್
ಅನಿಕೇತಸ್ಸ್ಥಿರಮತಿರ್ಭಕ್ತಿಮಾನ್ ಮೇಪ್ರಿಯೋ ನರಃ ೧೯

---

ರೂ ಪ ಕ ತಾ ಳ

ಸತತ ಅಶಾಶ್ವತದ ಸುಖಗಳ ಭೋಗಗಳಿಂ
ದತಿ ಹರುಷಿತನಾಗದೆ ದ್ವೇಷಿಸದೆ ಶೋಕಿಸದೆ
ಅತಿ ಕಾಂಕ್ಷೆಯನಳಿದ ಶುಭಾಶುಭ ಕರ್ಮದ ಫಲಗಳು ಶಾ
ಶ್ವತವಲ್ಲವೆಂದೊಂದನು ಬಯಸದೆ ವೈರಾಗ್ಯದಲಿ
ಸ್ಥಿತಜ್ಞಾನದಿ ಭಕ್ತಿಯನುಳ್ಳವನಾವನೊ ಅವನೆನಗೆ
ಅತಿ ಪ್ರಿಯ ಮದ್ಭಕ್ತನೊ ಕೇಳರ್ಜುನ ಇಂದಿರಾ
ಅತಿ ವಿಠಲ ನಾನವನಿಗೆ ಅತಿ ಸುಖದನೊ ತಿಳಿಯಿದನೆ

ಪದ ಅಟತಾಳ

ಸಮ ಶತ್ರು ಮಿತ್ರ ಮಾನಾಪ ಮಾನಗಳಲ್ಲಿ ಸಮನಾಗಿ ಚಲಿಸದಂದದಲಿ
ಸಮ ಶೀತೋಷ್ಣ ಸುಖದುಃಖ ದ್ವಂದ್ವಗಳಲಿ ಸಮನಾಗಿ ಸಂಗವಳಿಯುತಲಿ ೧

ಸ್ತುತಿನಿಂದೆಗಳುಕದೆ ಸಮವೆಂದರಿತ ಮೌನಿ ಸತತ ದೊರೆತ ಪದಾರ್ಥದಲಿ
ಅತಿ ತುಷ್ಟನಾಗಿ ಅನ್ಯರಸಾಶ್ರೈಸದೆ ಸ್ಥಿರಮತಿ ಭಕ್ತಿಯುಕ್ತನಾಗುತಲಿ ೨

ಹೀಗಿರುತಿಹನಾವನೊ ಅವನತಿಪ್ರಿಯನಾಗುವನೆನಗೆ ಪಾಂಡವನೆ
ಈ ಗೋಪ್ಯ ಧರ್ಮ್ಯಾಮೃತವನರಿತನುದಿನ ಭೂಗೋಳದೊಳಗಾವನಿದನೆ ೩

ಯೇತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇತೀವ ಮೇ ಪ್ರಿಯಾಃ ೨೦

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಭಕ್ತಿಯೋಗೋ**ನಾಮ ದ್ವಾದಶೋಧ್ಯಾಯಃ

---

ಆವ ವಿಧದಿ ಉಕ್ತವಾಗಿಹದದರಂತೆ ಭಾವಶುದ್ಧದಿ ಭಜಿಸುವರೊ
ಜೀವರು ಶ್ರದ್ಧಧಾನರು ಮತ್ಪರಮುಭಕ್ತರೀ ವಿಧರೆನಗತಿಪ್ರಿಯರೊ ೪

ಈ ಪರಿ ತತ್ವರಹಸ್ಯೋಪದೇಶಿಂದಿರಾಪತಿ ವಿಠಲ ಮಾಡಿದನೊ
ಭೂಪತಿ ಕೇಳೆಂದು ನುಡಿದಾ ಸಂಜಯನು ಮಹಾ ಪವಿತ್ರದ ರಹಸ್ಯವನೂ ೫

೧೮-೧೯-೨೦

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ "**ಗೀತಾರಂಜನಾ**"ಖ್ಯ ಗ್ರಂಥೇ
**ಭಕ್ತಿಯೋಗೋ**ನಾಮ ದ್ವಾದಶೋಧ್ಯಾಯಃ



ಹರಿಃ ಓಂ

# ಹದಿಮೂರನೆಯ ಅಧ್ಯಾಯ

---

ಅರ್ಜುನ ಉವಾಚ:—

ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞ ಮೇವಚ
ಏತದ್ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂಚ ಕೇಶವ ೧

ಶ್ರೀ ಭಗವಾನುವಾಚ:—

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ
ಏತದ್ಯೋವೇತ್ತಿತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ೨

---

ಆರ್ಯಾ:—

ತ್ರಿಗುಣಾತ್ಮಕ ಪ್ರಕೃತಿಯನು ಜೀವನನು
ಬಗೆಬಗೆ ಕ್ಷೇತ್ರ ಕ್ಷೇತ್ರಜ್ಞರನೂ
ಸುಗಮ ಜ್ಞಾನ ಸಾಧನೆ ಜ್ಞಾನ ವಿಷಯವ
ಮಿಗೆ ತಿಳಿಯಲ್ಬಿಚ್ಛಿಪೆ ಕೇಶವನೇ ೧

ಷಟ್ಪದೀ ತ್ರಿಪುಟತಾಳ

ಎಲೆ ಧನಂಜಯ ಕೇಳು ಪ್ರಕೃ
ತ್ಯಾಳಿಗಳ ತತ್ವವೆ ಕ್ಷೇತ್ರವೆನಿಪುದು
ತಿಳಿದವನು ಕ್ಷೇತ್ರವನು ಯಾವನೊ ಆವನೆ ಕ್ಷೇತ್ರಜ್ಞ
ಸುಲಲಿತಾತ್ಮಕನೆಂದು ಈ ಪರಿ
ತಿಳಿದವರು ಹೇಳುವರು ಪಾರ್ಥನೆ
ಹಲವು (ಎಲ್ಲ) ಕ್ಷೇತ್ರಗಳಲ್ಲಿ ಸ್ಥಿತನಾಗೆಲ್ಲ ಬಲ್ಲವನು ೨

ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವ ಕ್ಷೇತ್ರೇಷು ಭಾರತ
ಕ್ಷೇತ್ರ ಕ್ಷೇತ್ರಜ್ಞಯೋಃಜ್ಞಾನಂ ಯತ್ತಜ್ಞ್ಞಾನಂ ಮತಂ ಮಮ ೩

ತತ್ ಕ್ಷೇತ್ರಂ ಯಚ್ಚಯಾದೃಕ್ಚ ಯದ್ವಿಕಾರಿ ಯತಶ್ಚಯತ್
ಸಚಯೋಃ ಯತ್ಪ್ರಭಾವಶ್ಚ ತತ್ಸಮಾಸೇನ ಮೇಃ ಶೃಣು ೪

ಋಷಿಭಿರ್ಬಹುಧಾ ಗೀತಂ ಛಂದೋಃಭಿರ್ವಿವಿಧೈಃ ಪೃಥಕ್
ಬ್ರಹ್ಮಸೂತ್ರ ಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ೫

ಮಹಾಭೂತಾನ್ಯಹಂಕಾರೋಃ ಬುದ್ಧಿರವ್ಯಕ್ತ ಮೇಃವಚ
ಇಂದ್ರಿಯಾಣಿ ದಶೈಕಂಚ ಪಂಚಚೇಃಂದ್ರಿಯ ಗೋಃಚರಾಃ ೬

---

ಎನ್ನ ನೀ ಕ್ಷೇತ್ರಜ್ಞ ನೆಂದರಿ
ಇನ್ನು ಈ ಕ್ಷೇತ್ರಜ್ಞ ಕ್ಷೇತ್ರದ
ಘನ್ನ ಸುಜ್ಞಾನಾವುದದು ಕೇಳಿನ್ನ ಮತವೆಂದ
ಇನ್ನು ತತ್ ಕ್ಷೇತ್ರಾವು ದೆಂತಹ
ದನ್ನು ಆವ ವಿಕಾರವುಳ್ಳುದು
ಮುನ್ನ ಆರಿಂದದು ಪ್ರವರ್ತಿಪುದ್ಯೈಯ ಪ್ರೇರಣಾದಿ

ಮರಳಿ ಆ ಪ್ರೇರಕನು ಆವನೊ
ನರನೆ ಅವನ ಪ್ರಭಾವವಾವುದೊ
ಒರೆವೆ ಸಂಕ್ಷೇಪದಲಿ ಎನ್ನಿಂದದನೆ ಕೇಳೆಂದ
ಭರತ ಕುಲಜನೆ ಋಷಿಗಳಿಂದಲಿ
ಪರಿಪರಿಯ ವಿಧದಿಂದ ಕೀರ್ತಿತ
ಮರಳಿ ವಿವಿಧ ಪೃಥಕ್ ಸುಛಂದಸಿನಿಂದ ಹೇತುಗಳಿಂ ೩-೫

ಹಲವು ತರ್ಕಗಳಿಂದಲತಿ ನಿ
ರ್ಮಲ ಪುರಾಣ ಬ್ರಹ್ಮಸೂತ್ರಗ
ಳಲಿ ವಿನಿಶ್ಚಿತವಾದ ಗೋಪ್ಯವ ನೊರೆವೆ ನಾನಿಂದು

ಇಚ್ಛಾದ್ವೇಷಸ್ಸುಖಂ ದುಃಖಂ ಸಂಘಾತ ಶ್ಚೇತನಾ ಧೃತಿಃ
ಏತತ್ ಕ್ಷೇತ್ರಂ ಸಮಾಸೇನ ಸವಿಕಾರ ಮುದಾಹೃತಮ್ ೭

ಅಮಾನಿತ್ವಮದಂಭಿತ್ವ ಮಹಿಂಸಾ ಕ್ಷಾಂತಿರಾರ್ಜವಂ
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ೮

---

ಎಲೆ ಧನಂಜಯ ಕ್ಷೇತ್ರವೆಂದರೆ
ತಿಳಿ ಮಹಾ ಭೂತಗಳ ಪಂಚಕ
ಬಲುಹೆನಿಪಹಂಕಾರ ತತ್ವವು ಬುದ್ಧಿ ತತ್ವವು ಮೇಣ್

ನರನೆ ಕೇಳವ್ಯಕ್ತ ತತ್ವವು
ಮರಳಿ ಹನ್ನೊಂದಿಂದ್ರಿಯಗಳಿ
ನ್ನುರುತರದ ಜ್ಞಾನೇಂದ್ರಿಯಕೆ ಗೋಚರಿಪ ಶಬ್ದಾದಿ
ನಿರುತ ಭೋಗಿಪ ವಿಷಯ ಪಂಚಕ
ಮರಳಿ ಇಚ್ಛಾದ್ವೇಷ ದುಃಖವು
ಪರಮ ಸುಖ ಸಂಘಾತ ಚೇತನ ಧೃತಿಯು ಮೊದಲಾದ

ಘನ ವಿಕಾರದಿ ಸಹಿತ ಈ ವಿಧ
ತನುವಿಗೆಂಬರು ಕ್ಷೇತ್ರವೆಂದಿದ
ನಿನಗೆ ಸಂಕ್ಷೇಪದಲಿ ಹೇಳಿದೆ ಪಾಂಡವನೆ ಮರಳಿ
ಘನ ಸುತತ್ವಜ್ಞಾನ ಸಾಧನ
ದಿನದಿನದಿ ಮಾಳ್ಪುದಕೆ ಕಾರಣ
ವನೆ ನಿನಗೆ ಹೇಳುವೆನು ಕೇಳ್ ಸಂಕ್ಷೇಪದಿಂದೆಂದ ೬-೭

*ಜನರು ಮಾನವ ಮಾಡಬೇಕೆಂಬು
ದನೆ ಕೋರದೆ ದಂಭವಿಲ್ಲದೆ
ಜನಕೆ ಹಿಂಸೆಯ ಮಾಡದಲೆ ಬಹು ಕ್ಷಮೆಯ ಋಜುತನದಿ

---

*ಅಮಾನಿತ್ವಂ = ಆತ್ಮಶ್ಲಾಘನೆಯಿಲ್ಲದಿರುವಿಕೆ.

ಇಂದ್ರಿಯಾರ್ಥೇಷು ವೈರಾಗ್ಯ ಮನಹಂಕಾರ ಏವಚ
ಜನ್ಮಮೃತ್ಯು ಜರಾವ್ಯಾಧಿ ದುಃಖ ದೋಷಾನು ದರ್ಶನಂ ೯

ಅಸಕ್ತಿರನಭಿಷ್ವಂಗಃ ಪುತ್ರದಾರ ಗೃಹಾದಿಷು
ನಿತ್ಯಂಚ ಸಮಚಿತ್ತತ್ವ ಮಿಷ್ಟಾನಿಷ್ಟೋಪಪತ್ತಿಷು ೧೦

ಮಯಿ ಚಾನನ್ಯ ಯೋಗೇನ ಭಕ್ತಿರವ್ಯಭಿಚಾರಿಣೀ
ವಿವಿಕ್ತದೇಶ ಸೇವಿತ್ವಮರತಿರ್ಜನ ಸಂಸದಿ ೧೧

---

ಅನುದಿನದಿ ಆಚಾರ್ಯೋಪಾಸನೆ
ಮನವಚನ ತನುಶುದ್ಧಿ ಸ್ಥೈರ್ಯವು
ಮನವ ನಿಗ್ರಹಿಸುವುದು ವಿಷಯಗಳಲ್ಲಿ ವೈರಾಗ್ಯ ೮

ಜನ್ಮ ಮರಣ ಜರಾಧಿ ವ್ಯಾಧಿಗ
ಳಿನ್ನು ಸಂಸಾರದಲಿ ಬಹು ವಿಧ
ಬನ್ನಪ್ರದ ದೋಷಗಳ ಕಾಣುವುದ್ದಮ್ಮ ನಳಿಯುವುದು
ವನ್ನಿತೆಯು (ವನಿತೆಯು) ಸುತ ಸದನ ಮೊದಲಾ
ದಿನ್ನು ಬಹು ವಿಧ ವಿಷಯದಲಿ ಸ್ಪೃಹೆ
ಘನ್ನ ಸ್ನೇಹವನಳಿದು ನಿತ್ಯವಿದಲ್ಲವೆಂದರಿದು

ನಿತ್ಯ ಇಷ್ಟಾನಿಷ್ಟ ಉಭಯೋ
ತ್ಪತ್ತಿಯಲಿ ಸಮಚಿತ್ತನಾಗುತ
ಮತ್ತನನ್ಯ ಸುಯೋಗದಿಂದವ್ಯಭಿಚರಿತವಾದ
ಭಕ್ತಿಯೋಗವ ಮಾಡುತೆನ್ನಲಿ
ಉತ್ತಮೇಕಾಂತ ಪ್ರದೇಶವ
ಮತ್ತೆ ಸೇವಿಸುತಿರ್ದು ಜನಸಂಘದಿರತಿಯನಳಿದು ೯-೧೦

ನಿರತನಾಗ್ಯಧ್ಯಾತ್ಮಜ್ಞಾನದಿ
ಪರಮ ನಪರೋಕ್ಷವನೆ ಪಡೆಯಲು
ವರ ಸುಶಾಸ್ತ್ರಗಳನ್ನೆ ಅವಲೋಕಿಸುವುದಿವು ಎಲ

ಅಧ್ಯಾತ್ಮ ಜ್ಞಾನ ನಿತ್ಯತ್ವಂ ತತ್ವಜ್ಞಾನಾರ್ಥ ದರ್ಶನಂ
ಏತಜ್ಞ್ಞಾನ ಮಿತಿಪ್ರೋಕ್ತ ಮಜ್ಞಾನಂ ಯದತೋಽನ್ಯಥಾ ೧೨

ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಞ್ಞಾತ್ವಾಽಮೃತ ಮಶ್ನುತೇ
ಅನಾದಿ ಮತ್ಪರಂ ಬ್ರಹ್ಮ ನಸತ್ತನ್ನಾಸದುಚ್ಯತೇ ೧೩

ಸರ್ವತಃ ಪಾಣಿಪಾದಂ ತತ್ಸರ್ವತೋಕ್ಷಿ ಶಿರೋಮುಖಮ್
ಸರ್ವತಶ್ಶ್ರುತಿಮಲ್ಲೋಕೇ ಸರ್ವಮಾವೃತ್ಯತಿಷ್ಠತಿ ೧೪

---

ಪರಮ ತತ್ವಜ್ಞಾನ ಸಾಧನ
ವರಿಯೊ ಇದರಿಂದನ್ಯವಾವುದೊ
ಪಿರಿಯರಿಂದದು ಜ್ಞಾನಸಾಧನವಲ್ಲವೆನಿಸುವುದು

ಆವುದರಿಯಲು ಅರ್ಹವಾಗಿಹು
ದಾವುದರಿಯಲು ಮೋಕ್ಷ ಪಡೆವನೊ
ಆ ವಿಮಲ ಜ್ಞೇಯವ ನಿನಗೆ ನಾನೊರೆವೆ ಕರುಣದಲಿ
ಪಾವನನು ಪರಬೊಮ್ಮನಾದಿಯೊ
ಭಾವಿಸಲು ಸ್ವಭಾವ್ಯಾದಿ ಪಂಚಮ
ಹಾ ಭೂತ ವಿಲಕ್ಷಣನು ಶಾಶ್ವತನವನ ತಿಳಿಯೆಂದ ೧೧

ಸೀಸಮಾಲಿಕಾ:—

ಸರ್ವತಃ ಪಾಣಿಪಾದಾದ್ಯವಯವಗಳಿಂದ
ಸರ್ವತೋಕ್ಷಿ ಶಿರೋ ಮುಖಂಗಳಿಂದ
*ಸರ್ವ ವ್ಯಾಪಾರ ವೊಂದವಯವದಿ ಮಾಡುವ

---

*ಈ ಅರ್ಥವನ್ನೇ ಪ್ರತಿಪಾದಿಸುವ ಶ್ರೀ ಪುರಂದರದಾಸರಾಯರಿಂದ ವಿರಚಿತವಾದ ಸುಳಾದಿಯನ್ನು ಇದರೊಂದಿಗೆ ಓದಿಕೊಳ್ಳಬಹುದೆಂದು ಇದರಡಿ ಕೊಡಲಾಗಿದೆ.

ಮಟ್ಟತಾಳ

ಕಣ್ಣಲ್ಲಿ ಕೇಳುವ ಕಾಂಬುವ ನರಿವ ಆಘ್ರಾಣಿಸುವ ಆಸ್ವಾದಿಸುವ
ಶ್ರವಣದಿ ಕೇಳುವ ಕಾಂಬುವನರಿವ ಆಘ್ರಾಣಿಸುವ ಆಸ್ವಾದಿಸುವ

ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃಚ ೧೫

ಬಹಿರಂತಶ್ಚ ಭೂತಾನಾಮಚರಂ ಚರಮೇವಚ
ಸೂಕ್ಷ್ಮತ್ವಾತ್ತದ ವಿಜ್ಞೇಯಂ ದೂರಸ್ಥಂ ಚಾಂತಿಕೇ ಚತತ್ ೧೬

ಅವಿಭಕ್ತಂ (ಚಭೂತೇಷು) ವಿಭಕ್ತೇಷು ವಿಭಕ್ತಮಿವಚ ಸ್ಥಿತಂ
ಭೂತಭರ್ತೃಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣುಚ ೧೭

---

ಸರ್ವಶಕ್ತ ಬ್ರಹ್ಮನೀ ಲೋಕದಿ
ಸರ್ವತ್ರ ವ್ಯಾಪಿಸಿಪ್ಪನು ಪ್ರಕಾಶಿಪನಿವನು
ಸರ್ವೇಂದ್ರಿಯಗಳಿಗೂ ಗುಣವೊತ್ತಕೂ
ಸರ್ವ ಪ್ರಾಕೃತ ಇಂದ್ರಿಯಗಳಿಂದ ವರ್ಜಿತನು
ಸರ್ವರನು ಧರಿಸಿಹನು ನಿರ್ಲೇಪನು
ಸರ್ವ ಸತ್ವಾದಿ ಗುಣರಹಿತ ಸರ್ವರೊಳಿದ್ದು
ಪರಮ ಶುಭಸಾರ ಭೋಗಿಸುತಲಿಹನು
ಚರ ಅಚರ ಪ್ರಾಣಿಗಳ ಬಹಿರಂತರದಿ ವ್ಯಾಪ್ತ
ನಿರುಪಮನು ಸೂಕ್ಷ್ಮನಾಗಿರುವ ವೆಸೆಯಿಂ
ದರಿಯಲೋಸುಗ ಸಾಧ್ಯನಲ್ಲ ದುರ್ಜನರಿಂದ
ಮರಳಿ ದೂರಸ್ಥ ತದ್ಭಕ್ತ ಜನಕೆ
ಅತಿ ಸಮೀಪದೊಳಿರುವ ಅವಿಭಕ್ತನೊಬ್ಬನೆ
ಮಿತಿಯಿಲ್ಲದಾ ಜೀವರೊಳಗು ಹೊರಗು
ಇರುತಿಹ ವಿಭಕ್ತನೋಪಾದಿಯಲಿ ಕೇಳವನ

---

ರಸನದಿ ಕೇಳುವ ಕಾಂಬುವನರಿವ ಆಘ್ರಾಣಿಸುವ ಆಸ್ವಾದಿಸುವ
ಸ್ಪರುಶದಿ ಕೇಳುವ ಕಾಂಬುವನರಿವ ಆಘ್ರಾಣಿಸುವ ಆಸ್ವಾದಿಸುವ
ಘ್ರಾಣದಿ ಕೇಳುವ ಕಾಂಬುವನರಿವ ಆಘ್ರಾಣಿಸುವ ಆಸ್ವಾದಿಸುವ
ಲೋಕವಿಲಕ್ಷಣ ದಿವ್ಯಕರುಣ - ಲೋಕರಿಗಾಶ್ಚರ್ಯ ಪುರಂದರ ವಿಠಲ

ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿಸರ್ವಸ್ಯ ವಿಷ್ಠಿತಮ್ ೧೮

ಇತಿ ಕ್ಷೇತ್ರಂ ತಥಾಜ್ಞಾನಂ ಜ್ಞೇಯಂಚೋಕ್ತಂ ಸಮಾಸತಃ
ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೆ ೧೯

---

ವರ ರೂಪಗಳಿಗೆ ಭೇದಗಳಿಲ್ಲವೊ
ಎಲ್ಲ ಪ್ರಾಣಿಗಳ ಸೃಜಿಸುವನು ಸಾಕುವನು ಕಡೆ
ಗೆಲ್ಲವನು ಕೊಲ್ಲುವನು ಜ್ಞೇಯನವನು
ಅನಲ ಸೋಮಾರ್ಕಾದಿ ಕಾಂತಿಗಳಿಗೆಲ್ಲವನು
ಘನ ಕಾಂತಿವನು ತಮಃಪರನೆನಿಪನು
ಜ್ಞಾನರೂಪನು ಜ್ಞೇಯನಿವನೆಲ್ಲರಿಗು ಯೋಗ್ಯ
ತಾನು ಸಾರದಿ ಜ್ಞಾನದಿಂ ಗಮ್ಯನು
ಸರ್ವ ಜೀವರ ಹೃದಯದೊಳಗಿದ್ದು ಪ್ರೇರಿಸುವ
ಸರ್ವಶ್ರೇಷ್ಠನು ನಾನೆ ತದ್ಜ್ಞೇಯನು ೧೪-೧೮

ಆರ್ಯಾ:—

ಇನಿತು ಕ್ಷೇತ್ರದಾ ವಿಧವು ಜ್ಞಾನ ಸಾಧನವು ಜ್ಞೇಯದಾ ವಿಧವನ್ನೂ
ನಿನಗೆ ಹೇಳಿದೆನು ಸಂಕ್ಷೇಪದಿ ಅರ್ಜುನನೆ ಕೇಳು ಹೇಳುವೆನಿನ್ನೂ ೧

ಎನ್ನ ಭಕ್ತನಾದವ ನರಿತೀವಿಧ ವೆನ್ನಲಿ ಸೇರುವುದಕ ಅವನು
ಘನ್ನ ಸುಖವ ಭೋಗಿಸುವುದಕರ್ಹನೊ ಧನ್ಯನೀವಿಧವನರಿತವನು ೨

ಪರ ಪ್ರಕೃತಿ ಮತ್ತಪರ ಪ್ರಕೃತಿ ಇವೆರಡು ಪುರುಷನೆಂದರೆ ಪರನು
ಮರಳಿ ಜೀವ ಈ ದ್ವಿವಿಧರನಾದಿಯೆಂದರಿಯೊ ಪಾಂಡವನೆ ನೀನಿದನು ೩

ಪರ ಪ್ರಕೃತಿಯು ದೆಸೆಯಿಂದ್ಹುಟ್ಟುವುವೈ ಪರಿಪರಿ ತ್ರಿಗುಣ ವಿಕಾರಗಳು
ಪರನ ಪ್ರೇರಣದಿ ಕರ್ತಳೆಂದು ತಿಳಿ ಮರಳಿ ವಿಶ್ವವನೆ ಸೃಜಿಸುವಳು ೪

ಪ್ರಕೃತಿಂ ಪುರುಷಂಚೈವ ವಿದ್ಧ್ಯನಾದೀ ಉಭಾವಪೀ
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿ ಸಂಭವಾನ್ ೨೦

ಕಾರ್ಯಕಾರಣ ಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ
ಪುರುಷಸ್ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ೨೧

ಪುರುಷಃ ಪ್ರಕೃತಿಸ್ಥೋಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್
ಕಾರಣಂ ಗುಣ ಸಂಗೋಸ್ಯ ಸದಸದ್ಯೋನಿ ಜನ್ಮಸು ೨೨

ಉಪದ್ರಷ್ಟಾನುಮಂತಾಚ ಭರ್ತಾ ಭೋಕ್ತಾ ಮಹೇಶ್ವರಃ
ಪರಮಾತ್ಮೇತಿಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ೨೩

---

ತನುವಿಂದ್ರಿಯಗಳ ಕರ್ತೃತ್ವಕೆ ಕಾರಣ ಚಿತ್ಪ್ರಕೃತೆಂದ್ಹೇಳುವರೊ
ಘನ ಸುಖದುಃಖನ ಭೋಗಿಸುವೊಡೆ ಕಾರಣ ಜೀವನು ಎಂದ್ಹೇಳುವರೊ ೫

ಅದುಕಾರಣ ಜಡಪ್ರಕೃತಿಯ ಸಂಬಂಧದ ದೇಹದಿ ಸ್ಥಿತ ಚೇತನನು
ವಿಧ ವಿಧ ಪ್ರಕೃತಿಜ ವಿಷಯಗಳನುಭವ ಸದಮಾಡುತ ವ್ಯೆಮರೆದಿಪನು ೬

ಗುಣ ಸಂಗವೆ ಈ ಜೀವನಿಗನುದಿನ ಘನ ಸದಸದ್ಯೋನಿಗಳಲ್ಲೀ
ಜನಿಸುವುದಕೆ ಕಾರಣ ಸುಖದುಃಖಗಳನುಭವಿಸುವುದಕೆ ಧರೆಯಲ್ಲೀ ೭

೧೯-೨೨

ಅಷ್ಟಪದೀಗದ್ಯ—

ಈ ಶರೀರದಲಿ ಜೀವನ ಹೊರತು ಮತ್ತೊಬ್ಬ
ವಾಸವಾಗಿಹ ನುಪದ್ರಷ್ಟಯೆನಿಸುತ ಜೀವ
ರಾಶಿಗಳಿಗೆಲ್ಲ ಅನವರತ ಬಹು ವಿಧದಿಂದ
ಬೇಸರದೆ ಪ್ರೇರಿಸುತಲೀ

ಯ ಏವಂ ವೇತ್ತಿ ಪುರುಷಂ ಪ್ರಕೃತಿಂಚ ಗುಣೈಸ್ಸಹ
ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ೨೪

ಧ್ಯಾನೇನಾತ್ಮನಿ ಪಶ್ಯಂತಿ ಕೇ ಚಿದಾತ್ಮಾನ ಮಾತ್ಮನಾ
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ೨೫

ಅನ್ಯೇತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ೨೬

---

ಈಶನೆಂದೆನಿಸಿಕೊಂಡನ ದಿನದಿ ಜೀವರನು
ತಾಂ ಸಲಹುತಿಪ್ಪ ಪರಮಾತ್ಮ ವಿಷಯುಗಳಲ್ಲಿ
ತಾಂ ಸಮಿಾಚೀನರಸ ಭುಂಜಿಸುತಲಿಹ ನಿವ
ಮಹೇಶ್ವರನೆನಿಸಿಕೊಂಬನೂ ೧

ನರರೊಳಾವನು ಪ್ರಕೃತಿ ದ್ವಿವಿಧ ಪುರುಷ ದ್ವಿವಿಧ
ಮರಳಿ ತತ್ತದ್ಗುಣ ವಿವೇಕಿಸುತ ಚೆನ್ನಾಗಿ
ಅರಿತವನು ಸಂಸಾರವನುಭವಿಸುತಿದ್ದರು
ಮರಳಿ ಜನಿಸನು ಧರೆಯೊಳು

ನಿರ್ಧುತ ಧ್ಯಾನಿಸಿ ಮನದಿ ನೋಡುಪರು ತಮ್ಮ ಹೃ
ತ್ಸರಸಿಜದೊಳಿಪ್ಪ ಹರಿಯನು ಕೆಲರು ಕೆಲವರೀ
ಹರಿಯ ಕಾಂಬರು ಜ್ಞಾನಯೋಗದಿಂದಲಿ ಕೆಲವ
ರರಸುವರು ಕರ್ಮದಿಂದ ೨

ಅನುದಿನದಿ ಪರಮಾತ್ಮನಿರವ ಕಾಂಬರು ಕೆಲರು
ಮನುಜರಿದನರಿಯುದಲೆ ಕೇಳಿ ಗುರುಮುಖದಿಂದ
ಅನವರತ ಶ್ರುತಿ ಪರಾಯಣರು ಪೂಜಿಪರಿವರು
ಘನ ಮೃತ್ಯು ದಾಟುತಿಹರು

ಯಾವತ್ಸಂಜಾಯತೇಕಿಂಚಿತ್ಸತ್ತ್ವಂ ಸ್ಥಾವರ ಜಂಗಮಾಮ್
ಕ್ಷೇತ್ರ ಕ್ಷೇತ್ರಜ್ಞ ಸಂಯೋಗಾತ್ತದ್ವಿದ್ಧಿ ಭರತರ್ಷಭ ೨೭

ಸಮಂ ಹಿ ಸರ್ವ ಭೂತೇಷು ತಿಷ್ಠಂತಂ ಪರಮೇಶ್ವರಂ
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸಪಶ್ಯತಿ ೨೮

ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತ ಮೀಶ್ವರಂ
ನಹಿನಸ್ತ್ಯಾತ್ಮನಾಽಽತ್ಮಾನಂ ತತೋಽಯಾತಿ ಪರಾಂಗತಿಂ ೨೯

---

ಜನಿಸುತಿಹ ಜಂಗಮ ಸ್ಥಾವರಾತ್ಮಕ ಜೀವ
ರಿನಿತುಳಿಯದಂತೆಲ್ಲ ಕ್ಷೇತ್ರನಾಮಕ ಸಿರಿಯು
ಘನಮಹಿಮ ಕ್ಷೇತ್ರಜ್ಞ ಹರಿಯ ಸಂಯೋಗದಿಂ
ಜನಿಸುತಿಹರೆಂದು ತಿಳಿಯೊ ೩

೨೩-೨೭

ಪದ ಅಟತಾಳ

ಎಲ್ಲ ಪ್ರಾಣಿಗಳೊಳು ಸಮನಾಗಿ ಇರುತಿಹ
ನೆಲ್ಲ ಜೀವರು ಕೆಡುತಿರಲು
ಎಳ್ಳಷ್ಟು ಕೆಡ ಪರಮೇಶ್ವರನೆಂದಾವ
ಬಲ್ಲನೊ ಅವನೆ ಬಲ್ಲವನು ೧

ಸರ್ವತ್ರ ಸಮನಾಗಿ ಸ್ಥಿತ ಈಶ್ವರನ ಹೀಂಗೆ
ಸರ್ವದ ಭಾವಿಸುತಿಹನು
ಸರ್ವ ಶ್ರೇಷ್ಠನು ತನ್ನ ತಾ ಕೆಡಿಸನು ತಸ್ಮಾ
ತ್ಸರ್ವೋತ್ತಮ ಪದವನೈದುವನೊ ೨

ಹರಿಯೆ ಪ್ರಕೃತಿಯ ಹೇತು ಮಾಡಿಕೊಂಡು ನಿತ್ಯ
ಪರಿಪರಿಯೆಲ್ಲ ಕರ್ಮಗಳಾ

ಪ್ರಕೃತ್ಯೈವಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ
ಯಃ ಪಶ್ಯತಿ ತಥಾಽಽತ್ಮಾನಮಕರ್ತಾರಂ ಸಪಶ್ಯತಿ ೩೦

ಯದಾಭೂತ ಪೃಥಗ್ಭಾವಮೇಕಸ್ಥ ಮನುಪಶ್ಯತಿ
ತತ ಏವಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ೩೧

---

ನಿರುತ ಮಾಡಿಸುವ ನಾ ಕರ್ತನಲ್ಲೆಂದಾವ
ನರಿವನೊ ಅವನೆ ಅರಿತವನು ೩

ಬೇರೆ ಬೇರೆ ಸ್ಥಿತಿಯುಳ್ಳ ಜೀವಿಗಳೆಲ್ಲ
ವಾರಿಜನಾಭನೊಬ್ಬನಲಿ
ಸೇರಿಪ್ಪರಿವನಿಂದ ಸರ್ವತ್ರ ಸೃಷ್ಟಿ ವಿ
ಸ್ತಾರವಾಗುವ್ರದೊ ಈ ವಿಧದಿ ೪

ಅರಿವನ್ಯಾವಾಗೊ ಆಗಪ ಪ್ರಪ್ತೈದುವ
ಮರಳಿ ಕೇಳಿದನು ಪಾಂಡವನೆ
ಪರಮಾತ್ಮ ವ್ಯಯಗುಣ ರಹಿತಾದಿ ವರ್ಜಿತ
ಪರನಾದ ದೆಸೆಯಿಂದ ಇವನು ೫

ಎಲ್ಲ ದೇಹಗಳಲ್ಲಿದ್ದಾನಾಗಿದ್ದರು ಹುಟ್ಟು
ಇಲ್ಲದ ಕಾರಣವಿವನು
ಬಲ್ಲಿದ ಸತ್ವಗುಣಾದಿ ರಹಿತತೆಯಿಂದ
ಇಲ್ಲವಿವಗೆ ನಾಶವರಿಯೈ ೬

ಲೋಕವಿಲಕ್ಷಣ ಕ್ರಿಯೆಯುಳ್ಳವನಾಗಿ
ತಾ ಕ್ರಿಯಾರಹಿತನೆನಿಸುವನು
ಆ ಕಾರಣದಿ ಚಿಂತಾ ಸಂತಾಪ ದುಃಖ
ಶೋಕಾದಿ ನಿರ್ಲಿಪ್ತನಾಗಿಹನು ೭

ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯ ಮವ್ಯಯಃ
ಶರೀರಸ್ಥೋಽಪಿ ಕೌಂತೇಯ ನ ಕರೋತಿ ನಲಿಪ್ಯತೇ ೩೨

ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ
ಸರ್ವತ್ರಾವಸ್ಥಿತೋ ದೇಹೇ ತಥಾಽಽತ್ಮಾ ನೋಪಲಿಪ್ಯತೇ ೩೩

ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ೩೪

---

ಅತಿ ಸೂಕ್ಷ್ಮವಾಗಿಹ ದೆಸೆಯಿಂದ ಲಾಕಾಶ
ಸತತ ಸರ್ವದಿ ವ್ಯಾಪಿಸಿರೆ ತ
ದ್ಗತ ಮಲಿನದಿ ಲಿಪ್ತವಾಗದಂದದಿ ಹರಿ
ಕ್ಷಿತಿಯೊಳಗೆಲ್ಲ ದೇಹದಲಿ ೭

ಇದ್ದರಾದರು ಲಿಪ್ತನಲ್ಲ ದೋಷಗಳಿಂದ
ಬದ್ಧನಾಗನು ತಿಳಿಯಿದನೆ
ಶುದ್ಧ ಸುಖದಿ ಪೂರ್ಣ ಸರ್ವೇಶ ಸರ್ವತ್ರೊ
ಳಿದ್ದು ಕ್ರೀಡಿಸುತ ಮೋದಿಪನು ೮

ಹ್ಯಾಂಗೊಬ್ಬ ಸೂರ್ಯನೆ ಲೋಕಗಳೆಲ್ಲ ಚೆ
ನ್ನಾಗಿ ಪ್ರಕಾಶಿಸುತಿಹನೋ
ಹಾಂಗೆಲ್ಲ ಕ್ಷೇತ್ರಗಳೊಳು ಕ್ಷೇತ್ರಜ್ಞನು ತಾ ಚೆ
ನ್ನಾಗಿ ಪ್ರಕಾಶಿಸುತಿಹನು ೯

ನರನಾವ ಕ್ಷೇತ್ರ ಕ್ಷೇತ್ರಜ್ಞರ ಭೇದವ
ಮರಳಿ ಜೀವಗೆ ಜಡ ಪ್ರಕೃತಿ
ಪರಿಹಾರದ ವಿಧ ಜ್ಞಾನ ನೇತ್ರಗಳಿಂದ
ಅರಿತವ ಪಡೆವನೊ ಸುಗತಿ ೧೦

ಕ್ಷೇತ್ರ ಕ್ಷೇತ್ರಜ್ಞ ಯೋರೇವ ಮಂತರಂ ಜ್ಞಾನ ಚಕ್ಷುಷಾ
ಭೂತ ಪ್ರಕೃತಿ ಮೋಕ್ಷಂಚ ಯೇ ವಿದುರ್ಯಾಂತಿತೇ ಪರಂ ೩೫

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಪ್ರಕೃತಿಪುರುಷವಿವೇಕಯೋಗೋನಾಮ**
ತ್ರಯೋದಶೋಽಧ್ಯಾಯಃ

---

ಇಂದಿರಾಪತಿ ವಿಠಲನು ರಣದಲಿ ಕುಂತಿ
ನಂದನಗಿಂತು ಕರುಣದಲಿ
ಇಂದುಪದೇಶ ಮಾಡಿದ ವಿಧವ ಕೇ
ಳೆಂದಾಡಿವನು ಹರುಷದಲಿ ೧೧

೨೮-೩೫

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಕೇಶವನಾಮಾಖ್ಯ
ವಿರಚಿತೇ "**ಗೀತಾರಂಜನಾ**"ಖ್ಯ ಗ್ರಂಥೇ
**ಪ್ರಕೃತಿಪುರುಷವಿವೇಕಯೋಗೋನಾಮ**
ತ್ರಯೋದಶೋಽಧ್ಯಾಯಃ



ಹರಿಃ ಓಂ

# ಹದಿನಾಲ್ಕನೆಯ ಅಧ್ಯಾಯ

---

ಶ್ರೀ ಭಗವಾನುವಾಚ:—

ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನ ಮುತ್ತಮಂ
ಯಜ್ಜ್ಞಾತ್ವಾ ಮುನಯಸ್ಸರ್ವೇ ಪರಾಂ ಸಿದ್ಧಿಮಿತೋಗತಾಃ ೧

ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನವ್ಯಥಂತಿಚ ೨

ಮಮಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ
ಸಂಭವಸ್ಸರ್ವ ಭೂತಾನಾಂ ತತೋಭವತಿ ಭಾರತ ೩

---

ಆರ್ಯಾ:—

ಮತ್ತೆ ಹೇಳುವೆನು ಜ್ಞಾನಗಳೊಳತ್ಯುತ್ತಮ ಜ್ಞಾನರಹಸ್ಯವನೆ
ಚಿತ್ತದಿ ಆವುದನರಿತು ಮೋಕ್ಷ ಮುನಿಪೋತ್ತಮರೈದಿದರೋ ಅದನೆ ೧

ಈ ಪರಿ ಜ್ಞಾನವನಾಶ್ರೈಸೆನ್ನ ಸಾರೂಪ್ಯವನೈದಿದ ಬಳಿಕೆಂದೂ
ಆ ಪ್ರಳಯದಿ ವ್ಯಥೆ ಪಡರು ಜನಿಸರವರೀ ಪೃಥುವಿಲಿ ಸೃಷ್ಟಿಗೆ ಬಂದು ೨

ಅಷ್ಟಪದೀಗದ್ಯಾಃ:—

ಎನ್ನ ರಾಣಿಯೊ ಮಹದ್ಬ್ರಹ್ಮ ನಾಮಕ ಲಕ್ಷ್ಮಿ
ಇನ್ನು ನಾನವಳಲ್ಲಿ ಜಗದಾತ್ಮಕದ ಗರ್ಭ
ವನ್ನೆ ಇಡುತಿಹೆನು ಅವಳಿಂದೆಲ್ಲ ಪ್ರಾಣಿಗಳು
ಜನ್ಮವೈದುವರು ಕೇಳೈ

ಸರ್ವ ಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ
ತಾಸಾಂ ಬ್ರಹ್ಮಮಹದ್ಯೋನಿರಹಂ ಬೀಜಪ್ರದಃ ಪಿತಾ ೪

ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿ ಸಂಭವಾಃ
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ೫

ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಂ
ಸುಖ ಸಂಗೇನ ಬಧ್ನಾತಿ ಜ್ಞಾನ ಸಂಗೇನ ಚಾನಘ ೬

ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಽಽಸಂಗ ಸಮುದ್ಭವಂ
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಂ ೭

---

ಇನ್ನು ಸುರನರ ತಿರ್ಯಗಾದಿ ಯೋನಿಗಳಲ್ಲಿ
ಜನ್ಯರಾಗುವ ಯಾವ ಪ್ರಾಣಿಗಳೊ ಅವರಿಗೂ
ಜನ್ಮಸ್ಥಾನಗಳು ಮಹದ್ಬ್ರಹ್ಮವೋ ನಾ ಬೀಜ
ವನ್ನೆ ಪ್ರದ ತಂದೆ ಜಗಕೇ ೩-೪

ಮರಳಿ ಸತ್ವರಜಸ್ತಮೋಗುಣಕ್ಕಭಿಮಾನಿ
ಸಿರಿ ಭೂಮಿ ದುರ್ಗಿಯೆಂಬುವ ಪ್ರಕೃತಿ ಸಂಭವದ
ಮೂರು ಗುಣ ನಿತ್ಯ ರಾಜೀವರನು ದೇಹದಲಿ
ಭರದಿ ಬಂಧಿಸುತಿಪ್ಪುದು

ಎರಡೊಂದು ಗುಣದೊಳಗೆ ನಿತ್ಯ ನಿರ್ಮಲವಾಗಿ
ಇರುವ ಕಾರಣ *ಅನಾಮಯ ಪ್ರಕಾಶಿಕವಾಗಿ
ನಿರುತ ವಿಷಯಗಳ ಸುಖಜ್ಞಾನ ಸಂಗದಿ ನರರ
ಭರದಿ ಬಂಧಿಸುತಿಪ್ಪುದು ೫-೬

*ರೋಗಾದಿಗಳನ್ನು ಕೊಡದೆ ಜ್ಞಾನೋತ್ಪಾದಕವಾಗಿ

ತಮ ಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಂ
ಪ್ರಮಾದಾಲಸ್ಯ ನಿದ್ರಾಭಿಸ್ತನ್ನಿಬಧ್ನಾತಿ ಭಾರತ ೮

ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ
ಜ್ಞಾನಮಾವೃತ್ಯತು ತಮಃ ಪ್ರಮಾದೇ ಸಂಜಯತ್ಯುತ ೯

ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ
ರಜಸ್ಸತ್ತ್ವಂ ತಮಶ್ಚೈವ ತಮಸ್ಸತ್ತ್ವಂ ರಜಸ್ತಥಾ ೧೦

---

ಎಲೆ ಧನಂಜಯನೆ ರಾಗಾತ್ಮಕ ರಜೋಗುಣವು
ಬಲಿತ ತೃಷ್ಣಾ ಸಂಗ ಜನಕವಿದು ಜೀವರನ
ಹಲವು ಕರ್ಮದ ಸಂಗದಿಂದ ಬಂಧಿಸುತಿಹುದು
ತಿಳಿಯೆಂದನಾ ದೇವನು

ಬಲುಹೆನಿಪ ತಮ ಅವಿದ್ಯಾ ಜನಕವೆಂದೆನುತ
ತಿಳಿ ಸರ್ವ ಪ್ರಾಣಿಗಳಿಗೆಲ್ಲ ಮೋಹಪ್ರದವೊ
ಅಲಸ ಪ್ರಮಾದ ನಿದ್ರೆಗಳಿಂದ ಬಹು ವಿಧದಿ
ಬಲದಿ ಬಂಧಿಸುತಿಪ್ಪುದು ೭-೮

ಪದ ಅಟತಾಳ

ಸತ್ವ ಗುಣವು ನಿತ್ಯವಲ್ಲದ ಸುಖದಲಿ
ಹತ್ತಿಸುವುದು ಸಂಗ ರಜವು
ನಿಸ್ಸಾರವಾದ ಕರ್ಮಗಳಲ್ಲಿ ಪುರುಷನಾ
ಸಕ್ತನ ಮಾಳ್ಪುದು ತಸವೂ ೧

ಉತ್ತಮ ಜ್ಞಾನವನಾಚ್ಛಾದಿಸಿ ಜೀವ
ಮೊತ್ತರಿಗೆಲ್ಲನುದಿನದೀ
ಮತ್ತೆ ಪ್ರಮಾದಾದಿ ಸಕ್ತರ ಮಾಡಿನ್ನು
ಹತ್ತಿಸುವುದು ವಿಷಯದಲಿ ೨

ಸರ್ವ ದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ
ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ೧೧

ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ೧೨

---

ಕೆಲ ಕಾಲದಲಿ ಸತ್ವ ಗುಣವೆ ತಾ ಪ್ರಬಲಿಸಿ
ಉಳಿವ ರಜಸ್ತಮೋಗುಣವ
ಬಲವಾಗದಂತದರನೆ ತಿರಸ್ಕರಿಸಿ ಪ್ರ
ಬಲವಾಗಿ ವರ್ತಿಸುತಿಹುದು ೩

ಹೀಗೆ ರಜಸ್ತಮೋ ಗುಣಗಳು ಕೆಲ ಕಾಲ
ದಾಗ ಮಿಕ್ಕೆರಡು ಗುಣಗಳ್ಹ
ಚ್ಚಾಗದಂದದಿ ತಿರಸ್ಕರಿಸಿ ಪ್ರಕಾಶಿತ
ದಾಗುವದೈ ಕೇಳೊ ಇನ್ನೂ ೪

ಮತ್ತು ಈ ದೇಹದಿ ಮನ ಆದಿ ಇಂದ್ರಿಯ
ವೊತ್ತದಿ ಪ್ರ-ಕಾಶವಾದ
ಉತ್ತಮ ಜ್ಞಾನ ಪುಟ್ಟಿಪದ್ಯಾವಾಗೊ ಆಗ
ಸತ್ತ್ವಾಭಿವೃದ್ಧಿಯೆಂದರಿಯೊ ೫

ಘನ ರಜೋಗುಣ ಹೆಚ್ಚುತಿರಲು ಲೋಭವು ಸ್ಪೃಹೆ
ಮನದೊಳುದ್ಯೋಗ ಅಶಮವು
ಅನಘ ಕೇಳೈ ಕರ್ಮಾರಂಭವು ಇದು ಎಲ್ಲ
ಜನಿಸುತಿಹುದು ಪಾಂಡುಸುತನೆ ೬

ತಮವೆಂಬ ಗುಣ ಹೆಚ್ಚುತಿರೆ ಅಪ್ರಕಾಶವು
ಪ್ರಮದ ನಿರುದ್ಯೋಗ ಹಾಂಗೆ
ಅಮಿತ ಮೋಹವು ನಿದ್ರೆ ಆಲಸ್ಯ ಆಕ್ರೋಶ
ಮಮಕಾರಾದಿಗಳ್ಹುಟ್ಟುತಿಹುವೊ ೭

ಅಪ್ರಕಾಶೋಃ ಪ್ರವೃತ್ತಿಶ್ಚ ಪ್ರಮಾದೋಃ ಮೋಃಹ ಏವಚ
ತಮಸ್ಯೇತಾನಿ ಜಾಯಂತೇಃ ವಿವೃದ್ಧೇಃ ಕುರುನಂದನ ೧೩

ಯದಾ ಸತ್ತ್ವೇಃ ಪ್ರವೃದ್ಧೇತು ಪ್ರಲಯಂ ಯಾತಿ ದೇಃಹಭೃತ್
ತದೋತ್ತಮವಿದಾಂ ಲೋಃಕಾ ನಮಲಾನ್ ಪ್ರತಿಪದ್ಯತೇಃ ೧೪

ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇಃ
ತಥಾ ಪ್ರಲೀನಸ್ತಮಸಿ ಮೂಢಯೋಃನಿಷು ಜಾಯತೇಃ ೧೫

---

ನರನೆ ಮತ್ತಾವ ಕಾಲದಿ ಸತ್ವ ಗುಣ ಹೆಚ್ಚು
ತಿರಲಾಗ ಮೃತರಾದ ನರರು
ಪರಮ ನಿರ್ಮಲ ಬ್ರಹ್ಮವಿದರ ದೇಃಹಗಳನ್ನೆ
ತ್ವರದಿ ಐದು-ತಿಹರವರು ೮

ರಜಗುಣ ಹೆಚ್ಚಿದಾಗಳಿದು ಪೋಃದವರೆಲ್ಲ
ಯಜನಾದಿ ಕರ್ಮ ಸಂಗಿಗಳ
ದ್ವಿಜರ ಉದರದಿ ಜನ್ಮವನ್ನೈದುವರು ಕೇಳು
ವಿಜಯನೆ ತಮ ಹೆಚ್ಚುತಿರಲು ೯

ತಮ ಪರಿಹರಿಸಲು ಮೂಢ ಯೋಃನಿಗಳಲ್ಲಿ
ಜನಿಸುತಿಹರು ಧನಂಜಯನೆ
ಇನಿತು ತ್ರಿಗುಣದಿ ಮಾಡುವ ಕರ್ಮಕೆ ಫಲ
ವನೆ ಹೇಳುವೆನೊ ತಿಳಿಯಿದನೆ ೧೦

ಸತ್ವ ಕರ್ಮಕೆ ಫಲ ನಿರ್ಮಲ ಸುಖಭೋಗ
ಮತ್ತೆ ರಾಜಸ ಕರ್ಮಗಳಿಗೆ
ಜತ್ತಾದ ಸುಖದುಃಖ ಮಿಶ್ರಫಲವ ಭೋಗಿ
ಸುತ್ತಿಹ ತಮ ಕರ್ಮಗಳಿಗೆ ೧೧

ಕರ್ಮಣಸ್ಸುಕೃತಸ್ಯಾಹು ಸ್ಸಾತ್ತ್ವಿಕಂ ನಿರ್ಮಲಂ ಫಲಂ
ರಜಸಸ್ತು ಫಲಂ ದುಃಖ ಮಜ್ಞಾನಂ ತಮಸಃ ಫಲಂ ೧೬

ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವಚ
ಪ್ರಮಾದ ಮೋಹೌ ತಮಸೋ ಭವತೋಽಜ್ಞಾನಮೇವಚ ೧೭

ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇತಿಷ್ಠಂತಿ ರಾಜಸಾಃ
ಜಘನ್ಯಗುಣ ವೃತ್ತಿಸ್ಥಾ ಅಧೋಗಚ್ಛಂತಿ ತಾಮಸಾಃ ೧೮

---

ಜ್ಞಾನವಿಲ್ಲದ ಸುಖ ಭೋಗಿಪ ಮರಳಿ ಆ
ಜ್ಞಾನ ಹೆಚ್ಚಿಸುವಂಥ ಸುಖವೀ
ಮಾನವ ಪಡೆಯುವ ಫಲವಿದೆನ್ನುತ ತತ್ತ್ವ
ಜ್ಞಾನಿಗಳ್ಹೇಳುತಲಿಹರೋ ೧೨

ಸತ್ತ್ವ ಗುಣದ ದೆಸೆಯಿಂದ ನಿರ್ಮಲ ಜ್ಞಾನೋ
ತ್ಪತ್ತಿಯಾಹುದು ರಜೋಗುಣದಿ
ವಿತ್ತಾದಿಯಲಿ ಲೋಭ ಹುಟ್ಟುತಿಹುದು ಕೇಳೊ
ಮತ್ತೆ ಮಹಾ ತಮೋಗುಣದಿ ೧೩

ಪರಮ ಪ್ರಮಾದ ಅಜ್ಞಾನ ಮೋಹವ ಹುಟ್ಟು
ತಿಪುತಿಹುದಿನ್ನು ಕೇಳಿದನು
ವರ ಸತ್ವ ಗುಣದಲಿ ಸ್ಥಿರರೂರ್ಧ್ವ ಲೋಕದೊ
ಳಿರುವರು ಮಧ್ಯ ಲೋಕದಲಿ ೧೪

ಇರುವರು ರಾಜಸರಧಮ ಗುಣಸ್ಥರು
ನರರಧೋಲೋಕಕ್ಹೋಗುವರೊ
ಕರುಣಿ ಇಂದಿರೇಪತಿ ವಿಠಲನ ಕ್ಲುಪ್ತವಿ
ಹರಿಯೆಂದು ತಿಳಿಯೊ ಪಾಂಡವನೆ ೧೫

ನಾನ್ಯಂ ಗುಣೇಭ್ಯಃ ಕರ್ತಾರಂ ಯದಾದ್ರಷ್ಟಾಽನುಪಶ್ಯತಿ
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ೧೯

ಗುಣಾನೇತಾನತೀತ್ಯತ್ರೀನ್ ದೇಹೀ ದೇಹ ಸಮುದ್ಭವಾನ್
ಜನ್ಮಮೃತ್ಯು ಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ೨೦

ಅರ್ಜುನ ಉವಾಚ:—

ಕೈರ್ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ
ಕಿಮಾಚಾರಃ ಕಥಂಚೈತಾನ್ ತ್ರೀನ್ ಗುಣಾನತಿವರ್ತತೇ ೨೧

---

ಷಟ್ಪದೀ:—

ನಿರುತ ತ್ರಿಗುಣಗಳಿಂದಲೇ ಈ
ಪರಿಪರಿ ವಿಕಾರಗಳು ಜನಿಸಿದು
ವರಿವನಿದಕೆ ವಿಕಾರ ಕಾರಣವನ್ಯನಿಲ್ಲೆಂದು
ಅರಿವನ್ಯಾವಾಗಾಗ ತ್ರಿಗುಣಕೆ
ಪರನು ಹರಿಯೆಂದರಿವನವನೆ
ನ್ನಿರವನೈದುವ ಕೇಳು ಪಾಂಡವ ಎಂದನಸುರಾರಿ ೧೯

ತನುವ ಧರಿಸಿದ ಜನರು ಕೇಳ್ಳೈ
ತನುವಿನಲಿ ಸಂಭವಿಸುತಿಹ ಈ
ಘನ ತ್ರಿಗುಣವನೆ ಮೀರಿ ವರ್ತಿಸುತಿರಲು ಆ ನರನು
ಜನನ ಮರಣ ಜರಾದಿ ದುಃಖವ
ಹಣಿದು ಬಿಡುಗಡೆಯೈದಿ ಆದರಿಂ
ದನುಪಮದ ಅಮೃತವನು ಭೋಗಿಸುತಿಹನು ಕೇಳೆಂದ ೨೦

ಆರ್ಯಾ:—

ಆವ ಕುರುಹಿನಿಂದಿದ್ದರೆ ತ್ರಿಗುಣದ ಭಾವ ಮೀರಿದವನಾಗುವನೊ
ಆವ ವಿಧಾಚಾರವುಳ್ಳವ ಮಧ್ಯಾಂಗೀ ತ್ರಿಗುಣದಿ ತಾ ವರ್ತಿಪನೊ ೨೧

ಶ್ರೀ ಭಗವಾನುವಾಚ:—

ಪ್ರಕಾಶಂಚ ಪ್ರವೃತ್ತಿಂಚ ಮೋಹಮೇವಚ ಪಾಂಡವ
ನದ್ವೇಷ್ಟಿ ಸಂಪ್ರವೃತ್ತಾನಿ ನನಿವೃತ್ತಾನಿ ಕಾಂಕ್ಷತಿ ೨೨

ಉದಾಸೀನವದಾಸೀನೋ ಗುಣೈರ್ಯೋ ನವಿಚಾಲ್ಯತೇ
ಗುಣಾವರ್ತಂತ ಇತ್ಯೇವ ಯೋಽವ(ಸು)ತಿಷ್ಠತಿ ನೇಂಗತೇ ೨೩

---

ಅಷ್ಟಪದೀಗದ್ಯಾ:—

ಸತ್ವಗುಣ ಜನ್ಯಪ್ರಕಾಶ ರಜಗುಣದಿ ಉ
ತ್ಪತ್ತಿಯಾಗುವ ಕಾರ್ಯಕುದ್ಯೋಗ ತಮದಿ ಉ
ತ್ಪತ್ತಿಯಾಗುವ ಮೋಹಗಳು ನಿತ್ಯದಲಿ ಸಂಪ್ರ
ವೃತ್ತವಾಗುತಲಿದ್ದರು

ಮತ್ತೆ ಗುಣವನೆ ಮೀರಿ ವರ್ತಿಪನು ದ್ವೇಷಿಸ ನಿ
ವೃತ್ತವಾಗುತಲಿರಲು ಕಾಂಕ್ಷಿಸನು ಅತಿ ಸೂಕ್ಷ್ಮ
ಸತ್ವರಜ ಗುಣಜಪ್ರಕಾಶ ಮೊದಲಾದ ಪ್ರ
ವೃತ್ತಿಯಲಿ ಸಂಚರಿಪನೊ ೨೨

ಮನುಜನಾವನು ತ್ರಿಗುಣಗಳು ಭಗವದಿಚ್ಛೆಯಿಂ
ದನುದಿನದಿ ವರ್ತಿಸುತಲಿಹವಿವೆಂದರಿತು ತ
ದ್ಗುಣಜನ್ಯ ವಿವಿಧ ಕಾರ್ಯಗಳಿಂದ ಚಲಿಸದೆ
ಉದಾಸೀನನಂತೆ ಇದ್ದು

ಅನವರತ ಈ ಪ್ರಕಾರದಿ ಲೋಕದೊಳಗಾವ
ಮನುಜ ಸುಸ್ಥಿರನಾಗಿ ಚಲಿಸದಂದದಲಿದ್ದ
ವನೆ ಮೂರು ಗುಣಗಳನೆ ಮೀರಿದವನೆಂತೆಂದು
ಅನಘ ತಿಳಿ ಇದು ಗೋಪ್ಯವೊ ೨೩

ಸಮದುಃಖ ಸುಖಸ್ಸ್ವಸ್ಥಃ ಸಮಲೋಷ್ಟಾಶ್ಮ ಕಾಂಚನಃ
ತುಲ್ಯ ಪ್ರಿಯಾಪ್ರಿಯೋ ಧೀರಸ್ತುಲ್ಯ ನಿಂದಾತ್ಮ ಸಂಸ್ತುತಿಃ ೨೪
ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿ ಪಕ್ಷಯೋಃ
ಸರ್ವಾರಂಭ ಪರಿತ್ಯಾಗೀ ಗುಣಾತೀತಸ್ಸ ಉಚ್ಯತೇ ೨೫

---

ನಿರುತ ಸುಖದುಃಖ ಲೋಷ್ಟಾಶ್ಮ ಕಾಂಚನ ಮರಳಿ
ಪರಿಪರಿ ಪ್ರಿಯಾ ಪ್ರಿಯ ಪದಾರ್ಥ ನಿಂದಿಸುತಿಪ್ಪ
ನರರು ಆತ್ಮಸ್ತೋತ್ರ ಮಾಳ್ಪರಾವರು ಯೆಲ್ಲಿ
ನಿತ್ಯ ಅಸ್ವಾತಂತ್ರ್ಯರು

ಅರಿತು ಈ ವಿಧವ ಇಷ್ಟಾನಿಷ್ಟಗಳೊಳು ಬಹು
ಹರುಷ ದುಃಖವನ್ನೈದದಂತೆ ಸಮನಾಗಿರುವ
ಪುರುಷ ಧೀರನು ಸ್ವಸ್ಥನೆನಿಸುವನು ಜನರಿಂದ
ಕುರುನಂದನನೆ ಕೇಳಿದೂ ೨೪

ಮರಳಿ ಮಾನಾಪಮಾನವು ಸಂಭವಿಸಿದರೂ
ಅರಿ ಮಿತ್ರ ಪಕ್ಷರಲಿ ಸಮನಾಗಿ ಅನುಚಿತದ
ದುರಿತ ಕರ್ಮಾರಂಭ ಕರ್ತೃತ್ವವಳಿದಿಪ್ಪ
ಪುರುಷ ತ್ರಿಗುಣಾತೀತನೊ

ನಿರುತ ಅವ್ಯಭಿಚರಿತ ಭಕ್ತಿಯೋಗದಿ ಎನ್ನ
ಮರೆಹೊಕ್ಕು ಸೇವಿಸುತಲಿಹನಾವನೋ ಅವನು
ಎರಡೊಂದು ಗುಣ ವಿದಾರಿ ಲಕ್ಷ್ಮಿ ಪ್ರಾಪ್ತಿಗೆ ತಾನು
ಅರಹನೆಂದೆನಿಸುತಿಹನೊ

ನರನೆ ಅದುಕಾರಣ ಮಹದ್ಬ್ರಹ್ಮ ವಾಚ್ಯಳಾ
ಗಿರುವ ಲಕ್ಷ್ಮಿಗು ಮತ್ತೆ ವ್ಯಯರಹಿತ ಮುಕ್ತರಿಗು
ಪರಮ ಶಾಶ್ವತ ಧರ್ಮಗಳಿಗು ಮೋಕ್ಷಕು ನಾನು
ವರ ಪ್ರತಿಷ್ಠಾ ಕರ್ತನೊ

ಮಾಂಚಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ
ಸಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯಕಲ್ಪತೇ ೨೬

ಬ್ರಹ್ಮಣೋಹಿ ಪ್ರತಿಷ್ಠಾಹ ಮಮೃತಸ್ಯಾವ್ಯಯಸ್ಯಚ
ಶಾಶ್ವತಸ್ಯಚ ಧರ್ಮಸ್ಯ ಸುಖಸ್ಯೈಕಾಂತಿ ಕಸ್ಯಚ ೨೭

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಗುಣತ್ರಯವಿಭಾಗಯೋಗೋ**ನಾಮ
ಚತುರ್ದಶೋಧ್ಯಾಯಃ

---

ಭರತ ಕುಲತಿಲಕ ಪಾರ್ಥನೆ ಕೇಳಿದೆನ್ನುತಲಿ
ಕರುಣದಲಿ ಇಂದಿರಾಪತಿ ವಿಠಲ ನುಡಿದನ್ಯೆ
ಕುರುಕುಲಾಗ್ರಣಿಯೆ ಧೃತರಾಷ್ಟ್ರ ಕೇಳೆಂದೆನುತ
ಒರೆದ ಸಂಜಯನು ಇದನು (೨೫-೨೭)

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ **"ಗೀತಾರಂಜನಾ"**ಖ್ಯ ಗ್ರಂಥೇ
**ಗುಣತ್ರಯವಿಭಾಗಯೋಗೋ**ನಾಮ
ಚತುರ್ದಶೋಧ್ಯಾಯಃ



ಹರಿಃ ಓಂ

# ಹದಿನೈದನೆಯ ಅಧ್ಯಾಯ

---

ಶ್ರೀ ಭಗವಾನುವಾಚ:—

ಊರ್ಧ್ವಮೂಲ ಮಧಶ್ಶಾಖ ಮಶ್ವತ್ಥಂ ಪ್ರಾಹುರವ್ಯಯಮ್
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸವೇದವಿತ್ ೧

---

ಸೀಸಮಾಲಿಕಾ:—

ಮತ್ತೆ ಹೇಳುವೆನು ಪಾಂಡವನೆ ಕೇಳ್ಳೈ ನಾನು
ವಿಸ್ತರದಿ ಜಗವೆಂಬ ವೃಕ್ಷದಿರವ
ಸತ್ವಾದಿಯುಕ್ತ ಚಿದಚಿತ್ಪ್ರಕೃತಿಗಳು ಇದಕೆ
ವ್ಯಕ್ತಿದರು ಮೂಲ ಉಪಮೂಲದಂತೆ
ಎಲ್ಲಕುತ್ತಮ ವಿಷ್ಣು ಊರ್ಧ್ವನೆದಿರೇ ಇದಕೆ
ನಿಲ್ಲುವುದಕಾಸ್ಪದನು ಧರೆಯುಂವದಿ
ಮೂಲಭೂತನು ಬ್ರಹ್ಮ ಮೊದಲಾದ ಜೀವಿಗಳ
ಜಾಲರೆಲ್ಲರು ಅಧೋಯೆನಲಧಮರು
ಇವಕೆ ಶಾಖಾಭೂತರಾಗಿಹರು, ವೇದಗಳು
ಇದಕೆ ಪರ್ಣಗಳೆಂದು ಕರೆಸುತಿಹವು
ಏಕ ಪ್ರಕಾರದಿಂದಿರವ ಕಾರಣದಿ ಈ
ಲೋಕ ವೃಕ್ಷಶ್ವತ್ಥವೆಂದ್ಹೇಳ್ವರು
ಇದು ಪ್ರವಾಹದ ರೂಪದಿಂದ ಶಾಶ್ವತವು ಕೇ
ಳದು ಕಾರಣವ್ಯಯವೆನಿಸುತಿಪ್ಪುದು
ಇದನಾವ ಬಲ್ಲನೋ ಅವ ವೇದ ಬಲ್ಲವನು
ಇದಕೆ ಪೂರ್ವೋಕ್ತ ಶಾಖಾಭೂತವಾ

ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ
ಗುಣ ಪ್ರವೃದ್ಧಾ ವಿಷಯ ಪ್ರವಾಲಾಃ
ಅಧಶ್ಚ ಮೂಲಾನ್ಯನು ಸಂತತಾನಿ
ಕರ್ಮಾನುಬಂಧೀನಿ ಮನುಷ್ಯಲೋಕೇ ೨

ನರೂಪಮಸ್ಯೇಹ ತಥೋಪ ಲಭ್ಯತೇ
ನಾಂತೋ ನಚಾದಿರ್ನಚ ಸಂಪ್ರತಿಷ್ಠಾ
ಅಶ್ವತ್ಥಮೇನಂ ಸುವಿರೂಢ ಮೂಲ
ಮಸಂಗ ಶಸ್ತ್ರೇಣ ದೃಢೇನ ಛಿತ್ವಾ ೩

---

ಚೇತನಾಚೇತನ ಸ್ವರೂಪಿ ಮಹದಹಂಕಾರ
ವಾದೆಂಟು ವಸ್ತುಗಳು ಅಧಮದೇಹ
ಗಳಲು ಉತ್ಕೃಷ್ಟ ಪ್ರಕೃತಿಯಲು ವ್ಯಾಪಿಸಿ ಬಹಳ
ಸೂಕ್ಷ್ಮರೂಪದಿ ತೋರುತಿಹವು ತಿಳಿಯೈ
ತ್ರಿಗುಣದಿಂದಭಿವೃದ್ಧವಾದ ಶಬ್ದಾದಿ ವಿಷ
ಯಗಳಿದಕೆ ತಿಳಿಯೊ ಪ್ರವಾಳವೆಂದು
ಎಲೆಗಳೆಂಬುವ ವೇದಜ್ಞಾನದಿಂ ಮೋಕ್ಷ ಫಲ
ಫಲಿಸುವುದು ಸುಖಭೋಗವದರ ರಸವೊ
ಅಧಮ ಶಾಖಾಭೂತರಾದ ಜೀವರಿಗೆಲ್ಲ
ಮೊದಲುಕ್ತ ಮೂಲಗಳುಯೆನಲು ಕೇಳೈ
ಹ್ಯಾಂಗೆ ಮೂಲಗಳು ವೃಕ್ಷದ ಶಾಖೆ ವೃದ್ಧಿದವೊ
ಹಾಂಗೆ ಭಗವದ್ರೂಪಗಳು ನಿತ್ಯದ
ನರಲೋಕದಲಿ ಕರ್ಮ ಅನುಬಂಧದಿಂದ ಪರಿ
ಪರಿ ಫಲವ ಕೊಡುವುದೆಂತೆಂದು ತಿಳಿಯೊ ೧-೨

ಷಟ್ಪದೀ ತ್ರಿಪುಟತಾಳ

ಜಗದಾಖ್ಯ ವಶ್ವತ್ಥ ವೃಕ್ಷವು
ಮಿಗೆ ವಿಕಾರ ಸ್ವರೂಪಿಯಾದುದು
ಜಗದೊಳಿಹ ಮಾನವರಿಗೇಕ ಪ್ರಕಾರ ಕಾಣಿಸದೈ

ತತಃಪರಂ ತತ್ಪರಿಮಾರ್ಗಿತವ್ಯಂ ಯಸ್ಮಿನ್ ಗತಾನನಿವರ್ತಂತಿ ಭೂಯಃ
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ
[ಪುರಾಣೀ ೪

ನಿರ್ಮಾನ ಮೋಹಾ ಜಿತ ಸಂಗದೋಷಾ ಅಧ್ಯಾತ್ಮ ನಿತ್ಯಾ ವಿನಿವೃತ್ತ
[ಕಾಮಾಃ
ದ್ವಂದ್ವೈರ್ವಿಮುಕ್ತಾಸ್ಸುಖದುಃಖ ಸಂಜ್ಞೈರ್ಗಚ್ಛಂತ್ಯ ಮೂಢಾಃ
[ಪದಮವ್ಯಯಂ ತತ್ ೫

---

ಜಗಕೆ ಕಾರಣ, ಲಯಕೆ ಕರ್ತೃವು,
ಮಿಗೆ ಪ್ರವಿಷ್ಟನುಮಾದ ಹರಿಯಂ
ಅಗಣಿತ ಪರಿಶ್ರಮವ ಮಾಡದೆ ಕಾಣ್ಬುದರಿದರಿಯೈ

ಘನ ಸುಶಸ್ತ್ರದಿ ಮೂಲವನು ಛೇ
ದನವ ಮಾಡಲು ಬೇಕೆನಲು ಕೇ
ಳನುದಿನದಿ ಶಾಸ್ತ್ರಾವಮರ್ಶನದಿಂದ ಮೂಲನ್ನಾ
ಮನನ ಮಾಡುತ ಜನಕೆ ಪರಮನೆಂ
ದೆನುತ ತಿಳಿಯಲಿಬೇಕಿದೆಂಬುವ
ಘನ ರಹಸ್ಯವ ತಿಳಿಯೊ ಪಾಂಡುಕುಮಾರನೆಂತೆಂದಾ

ಅದಕನಂತರದಲ್ಲಿ ಆ ಹರಿ
ಪದದ ಮಾರ್ಗವ ಹುಡುಕುತಲಿ ಆ
ವುದನೆ ಪಡೆದವರೆಂದು ತಿರುಗರೊ ವಿಶ್ವವಾರಿಂದ
ಉದಿಸಿ ವಿಸ್ತರಿಸಿಹುದೊ ಆತನ
ವಿಧಿಮುಖರಿಗಿನ್ನಾದಿಕರ್ತನ
ಸದಯ ಪರಮ ಪುರಾಣ ಪುರುಷನ ಮೊರೆಹೊಗುವುದೆಂದಾ

೩-೪

ನತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ
ಯದ್ಗತ್ವಾ ನನಿವರ್ತಂತೇ ತದ್ಧಾಮ ಪರಮಂ ಮಮ ೬

---

ಪದ ಧನ್ಯಾಸಿರಾಗ ಆದಿತಾಳ

ಈ ದೃಶ ಪದವನೆ ಐದುವನಿರವಾ
ಬೋಧಿಸುವೆನುತ್ತಮವಾದ ಈ ವಿಧವಾ ಪ.

ನಾನು ಮಾಡಿದೆ ಕರ್ಮವೆಂಬ ಕುತ್ಸಿತಭಿ
ಮಾನ ಈ ವಿಧ ಮೋಹವನಳಿದಿಹನ್ನೈ ೧

ಅದುಕಾರಣ ಕರ್ಮಫಲವೆನಗಿಲ್ಲ
ಮದಡರಿಗುಂಟೆಂದು ತಿಳಿದಿಹನ್ನೈಯ ೨

ಫಲವಾಹದೆನಗೆಂಬ ಸಂಗವೆಂಬುವ ಈ
ಬಲೆಗೆ ಸದೃಶ ಮೋಹಾ ಗೆದ್ದಿಹನ್ನೈಯ ೩

ಹರಿಯೆ ದ್ವಿವಿಧ ಕರ್ಮ ಮಾಡಿಪನೆನುತೀ
ಪರ ಸು ಅಧ್ಯಾತ್ಮ ಜ್ಞಾನದಲಿ ನಿರತನ್ನೈ ೪

ಅದುಕಾರಣ ಕರ್ಮಫಲ ಪ್ರತಿಗ್ರಹವೂ
ಸದಮಾಡದೆ ಕರ್ಮವಳಿದಿಹನ್ನೈಯ ೫

ದ್ವಂದ್ವ ಕರ್ಮದ ಫಲದುಃಖ ಸುಖವೆಂಬ
ಬಂಧದಿ ಮುಕ್ತರೀವಿಧ ಜ್ಞಾನದಿಂದ ೬

ಹೀಗೆ ಧೀಯುಕ್ತರಾದ ಜ್ಞಾನಿಗಳೆಲ್ಲ
ಹೋಗುವರಾಪರಿ ಕೆಡಗ ಪದವಿಗೆ ೭

ಇನ್ನು ಹೇಳುವೆ ಇಂದಿರೇಶ ವಿಠ್ಠಲನ
ಘನ್ನಾನುಪಮಾ ಪದದಿರವನಾ ನಿನಗೆ ೮

ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ
ಮನಷ್ಷಷ್ಠಾನೀಂದ್ರಿಯಾಣಿ ಪ್ರಕೃತಿ ಸ್ಥಾನಿಕರ್ಷತಿ ೭

ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿ ವಾಶಯಾತ್ ೮

---

ಟಿಪ್ಪಣೀ :—

ಯಾವ ಮತ್ಪದವನ್ನೆರವಿ ಶಶಿ
ಪಾವಕರು ಪ್ರಭೆಯಿಂದ ಬೆಳಗರೊ
ಭಾವಶುದ್ಧ ಜ್ಞಾನಭಕ್ತಿಯನುಳ್ಳ ಮಾನವರೂ
ಆವುದನೆ ಪಡೆದೆಂದು ತಿರುಗರೊ
ಆ ವಿಮಲವಾಗಿಪ್ಪ ಎನ್ನಯ
ಪಾವನೋತ್ತಮ ಧಾಮವರಿಯೆಂದನು ರಮಾಧವನು ೬

ನರನೆ ಕೇಳೀ ಜೀವಲೋಕದೊ
ಳಿರುವ ಬ್ರಹ್ಮಭವೇಂದ್ರ ಮೊದಲೀ
ಪರಿಯನಂತರು ಜೀವಭೂತ ಸನಾತನರು ಎನಗೆ
ಅರಿಯೊ ಪ್ರತಿಬಿಂಬರು ಕ್ವಚಿತ್ಸದೃ
ಶರು ಸದಾ ಅದುಕಾರಣೀವಿಧ
ಸರುವ ಪ್ರಾಣಿ ಸಮೂಹ ಮದ್ಭಿನ್ನಾಂಶ ತಿಳಿಯೆಂದ

ಈ ವಿಧದ ಪ್ರಾಣಿಗಳನಂತರಿ
ಗಾವ ಬರುತಿಹ ದೇಹದೊಳು ತಾ
ಜೀವರಿಂದಲಿ ಸಹಿತನಾಗಿ ಪ್ರವೇಶ ಮಾಡುವನೊ
ದೇವನಾಗಲೆ ವಿಷಯದತ್ತಲು
ಜೀವಿಗಳ ಪ್ರಕೃತಿಸ್ಥವಾಗಿಹ
ಭಾವ ಮೊದಲಾದಾರು ಇಂದ್ರಿಯಗಳನೆ ಸೆಳೆಯುವನೊ ೭

ಶ್ರೋತ್ರಂ ಚಕ್ಷುಸ್ಸ್ಪರ್ಶನಂ ಚ ರಸನಂ ಘ್ರಾಣಮೇವಚ
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ೯

ಉತ್ಕ್ರಾಮಂತ ಸ್ಥಿತಂವಾಽಪಿ ಭುಂಜಾನಂವಾ ಗುಣಾನ್ವಿತಂ
ವಿಮೂಢಾನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ೧೦

---

ಈಶನಾವ ಶರೀರದಲಿ ಪ್ರಾ
ವೇಶ ಮಾಡಿಸುತಿಹನೊ ಜೀವರು
ಆ ಶರೀರಗಳಿಂದ ಉತ್ಕ್ರಮಣವನೆ ಮಾಡಿಸನೊ
ಆ ಸಮಯದಲಿ ಪುಷ್ಪನಿಚಯದ
ವಾಸನೆಯ ಮಾರುತನು ದೈವಂ
ತೀ ಸಕಲ ಪ್ರಾಣಿಗಳ ತೆಗೆದೊಯ್ಯುವನೊ ಮಾಧವನು ೮

ಶ್ರವಣನಯನ ಘ್ರಾಣತ್ವಗ್ರಸ
ನಿವ್ರಗಳೊಳು ಮನದೊಳು ನಿರುತಮಾ
ಧವನು ಸಂಸ್ಥಿತನಾಗಿ ವಿಷಯಜ ದುಃಖ ಸುಖವೆಂಬ
ವಿವಿಧ ಭೋಗವ ಜೀವಗೀಯುತ
ಕವಿಭಿರೀಡಿತ ನೋಡಿ ಕ್ರೀಡಿಪ
ಭವದಿ ಜೀವರ ತಿರುಗಿಸುತ ಆನಂದ ಭೋಗಿಪನೊ ೯

ಈ ವಿಧದಿ ಸುಖದುಃಖ ವೊತ್ತಗ
ಳೀವನೆಲ್ಲ ಶರೀರದೊಳಗೀ
ಜೀವರನೆ ಹೊಗಿಸುತಲು ಉತ್ಕ್ರಮಣವನೆ ಮಾಡಿಸುವ
ಏವಮಾದಿ ಗುಣಾನ್ವಿತನ ಮಹಿ
ಮಾವಳಿಯು ಅತಿ ಮೂಢರರಿಯರು
ಭಾವಶುದ್ಧ ಜ್ಞಾನನಯನುಳ್ಳವರು ಅರಿಯುವರೊ ೧೦

ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಂ
ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ೧೧

ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋವಿದ್ಧಿ ಮಾಮಕಂ ೧೨

ಗಾಮಾವಿಶ್ಯಚ ಭೂತಾನಿ ಧಾರಯಾಮ್ಯಹ ಮೋಜಸಾ
ಪುಷ್ಣಾಮಿಚೌಷಧೀಸ್ಸರ್ವಾ ಸ್ಸೋಮೋಭೂತ್ವಾ ರಸಾತ್ಮಕಃ ೧೩

---

ವರಸುಯೋಗಿಗಳೆಂದೆನ್ನದಿಂ ಹೃ
ತ್ಸರಸಿಜದೊಳಾವಾಸವಾಗಿಹ
ಹರಿಯ ಕಾಂಬರು ಶುದ್ಧ ಬುದ್ಧಿಯನಳಿದ ಚೇತಸರು
ಸಿರುತ ಯತ್ನವ ಮಾಡಿದರು ಕಾ
ಣರು ಕಣಾ ಪರಮಾತ್ಮನಿರವನು
ನರರೊಳಧಮರು ಮೋಕ್ಷ ಸುಖವನೆ ಪಡೆಯರೆಂದೆಂದು ೧೧

ಪದ ಅಟತಾಳ

ಮತ್ತೆ ಗೋಪ್ಯವನೆ ಹೇಳುವೆ ಕೇಳೊ ನಿಸ್ತರಿಸಿದನೆ ಪ

ಯತ್ತೇಜದಿಂದಗ್ನಿ ಸೂರ್ಯ ಚಂದ್ರರು ಬೆಳಗುತಿಹರೊ
[ಜಗವೆಲ್ಲ ಆ ತೇಜವು ಅ.

ಎನ್ನದೆಂದರಿಯೊ ಮತ್ತೇಜಗ
ಳಿನ್ನು ಭೋಪರಿಯೋ ಎನ್ನಮಹಿಮೆಗ
ಳನ್ನೆ ಕೇಳೈಯು ಭೂಮಿಯನ್ನೆ ನಾ ಪ್ರವೇಶಿ
ಸೆನ್ನ ಬಲದಿ ಧರಿಸಿಹೆನೆಲ್ಲಾ ಜೀವರ ೧

ಎಲ್ಲೌಷಧಿಯನೆ ಪೋಷಿಪೆ ಚಂದ್ರ
ನಲ್ಲಿದ್ದು ನಾನೆ, ರಸಮಯನಾದಾ
ಸಲ್ಲಲಿತಾತ್ಮ ನಾನೆ - ಸೋಮನಲಿ ಸೋಮ
ನೆಲ್ಲಾದೊಳಿಹೆ ತತ್ತನ್ನಾಮದಿ ಕರೆಸುತ ೨

ಅಹಂ ವೈಶ್ವಾನರೋಭೂತ್ವಾ ಪ್ರಾಣಿನಾಂದೇಹಮಾಶ್ರಿತಃ
ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ೧೪

ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ
ಮತ್ತಃ ಸ್ಮೃತಿಜ್ಞಾನ ಮಪೋಹನಂಚ
ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತ ಕೃದ್ವೇದ ವಿದೇವ ಚಾಹಂ ೧೫

---

ಪ್ರಾಣಾಪಾನದಿ ಮರುತರೊಳಿದ್ದು
ನಾನೆ ಅನಾದಿ ಅಗ್ನಿಯೊಳಿದ್ದು
ನಾನೆ ವೈಶ್ವಾನರನಾಗಿ - ಪ್ರಾಣಿಗಳಂಗ
ವನು ಆಶ್ರೈಸಿ ಚತುರ್ವಿಧಾನ್ನ ಪಚಿಪೆ ೩

ನಾನೆ ಈ ಜಗದಿ ಸರ್ವರ ಹೃದ
ಯ ನಿಕೇತನದಿ ಸಂಸ್ಥಿತನಾಗಿ
ನಾನೆ ಸ್ಮೃತಿ ಜ್ಞಾನ - ಅಜ್ಞಾನ ಪ್ರದನಾಗು
ವೆನು - ಎನ್ನಿಂದಲೀ ವಿಧವ ನೈದುವರೆಲ್ಲ ೪

ಎಲ್ಲಾ ವೇದಗಳಿಂ ವೇದ್ಯನು ನಾನು
ಬಲ್ಲ ಜ್ಞಾನಿಗಳಿಂ ವೇದಾಂತಗ
ಳೆಲ್ಲ ಮಾಡಿದವ ನಾನೆಂದೆನಿಸುವೆ ಮತ್ತು
ಎಲ್ಲ ವೇದವ ನಾನೆ ಬಲ್ಲವನೆನಿಸುವೆ ೫

ನಾನೆ ಭಕ್ತರನೆ ಸಾಕುವ ಸುರ
ಧೇನು ಕೇಳಿದನೆ ಪಾರ್ಥನೆ ತಿಳಿ
ನಾನಿಂದಿರೇಶ ವಿಠಲನೊ ಎನ್ನಿರವನು
ಜ್ಞಾನಗಳರಿವ ರಜ್ಞಾನಿಗಳರಿಯರೊ ೬

೧೨-೧೫

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ
ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ೧೬

ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ
ಯೋ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ೧೭

---

ಅಷ್ಟಪದೀಗದ್ಯಾ:—

ನರನೆ ಕೇಳೈ ಲೋಕದೊಳು ಕ್ಷರಾಕ್ಷರರೆಂಬ
ರೆರಡು ಬಗೆ ಪುರುಷರಿರುತಿಹರು ದೇಹವ ಧರಿಸಿ
ಮರಣವೈದುವ ಬ್ರಹ್ಮ ಮೊದಲು ಸ್ತಂಭಾಂತೆಲ್ಲ
ಪರಿಪರಿಯ ಜೀವ ಸಂಘ

ಕ್ಷರರೆಂದು ಕರೆಸಿಕೊಳುತಿಹರು ಕೂಟಸ್ಥಳೆನೆ
ಕ್ಷರರಾಸಿಗಳನೆ ತನ್ನೊಳಗಿಟ್ಟ ಕಾರಣದಿ,
ಮರಳಿ ಆಕಾಶದಂದದಿ ಲಿಪ್ತಳಾಗದಲೆ
ಇರುವ ಕಾರಣದಿ ಸಿರಿಯೂ ೧

ನರರಿಂದ ಕೂಟಸ್ಥಳೆಂದೆನಿಸಿಕೊಂಬುವಳು ಅ-
ಕ್ಷರಳೆಂದು ಖ್ಯಾತಳಾಗಿಹಳು ಈಪರಿ ದ್ವಿವಿಧ
ಕ್ಷರ ಅಕ್ಷರರಿಗುತ್ತಮ ಭಿನ್ನ ಮತ್ತೊಬ್ಬ
ಪುರುಷನೆ ಪರಮಾತ್ಮನು

ನರನೆ ಕೇಳಾವಾತ ಲೋಕತ್ರಯದೊಳ್ಹೊಕ್ಕು
ಧರಿಸುತಿಹನದರ ಭಾರವನೆ ತಾಂ ಕೆಡದವನು
ಪರಮೇಶನೆಂದು ವೇದಾಂತ ವಾಕ್ಯಗಳಿಂದ
ತರತರದಿ ಹೊಗಳುತಿಹರೋ ೨

ಯಸ್ಮಾತ್ ಕ್ಷರಮತೀತೋಽಹ ಮಕ್ಷರಾದಪಿ ಚೋತ್ತಮಃ
ಅತೋಽಸ್ಮಿ ಲೋಕೇ ವೇದೇಚ ಪ್ರಥಿತಃ ಪುರುಷೋತ್ತಮಃ ೧೮

ಯೋಮಾಮೇವ ಮಸಮ್ಮೂಢೋ ಜಾನಾತಿ ಪುರುಷೋತ್ತಮಂ
ಸಸರ್ವ ವಿದ್ಭಜತಿ ಮಾಂ ಸರ್ವಭಾವೇನ ಭಾರತ ೧೯

---

ಮರಳಿ ಕೇಳಾವ ಕಾರಣದಿ ಕ್ಷರರೆಂಬ ಈ
ಪುರುಷರಿಗು ಮಿಾರಿದಕ್ಷರ ಶಬ್ದವಾಚ್ಯಳಾ
ಗಿರುವ ಲಕ್ಷ್ಮಿಗು ಮಿಾರಿದತ್ಯುತ್ತಮನು ಕೇಳು
ನರನೆ ತಸ್ಮಾತ್ಕಾರಣಾ

ಪರಮ ಪುರುಷೋತ್ತಮನು ನಾನೆಂದು ಲೋಕದೊಳು
ವರ ಶ್ರುತಿಸ್ಮೃತಿಗಳಿಂದಲಿ ಖ್ಯಾತನಾಗಿಹೆನೊ
ಭರತ ಕುಲತಿಲಕ ಪಾಂಡವನೆ ಈ ವಿಧವನ್ನು
ಅರಿಯೆಂದನಾ ದೇವನು ೩

೧೬-೧೮

ಆರ್ಯಾ:—

ನರನ್ಯಾವನು ಮೂಢತ್ವವನಳಿದು - ಪುರುಷೋತ್ತಮನೆಂದೀ ವಿಧದಿ
ಅರಿತವ ಸರ್ವಜ್ಞನು ಕೇಳೆನ್ನನು ಸರುವ ಭಾವದಿಂದನುದಿನದೀ ೧

ಶ್ರದ್ಧೆಯಿಂದ ಭಜಿಸುವನೈ ಇದು ಪರಿಶುದ್ಧ ಗುಹ್ಯತಮ ಶಾಸ್ತ್ರವನೇ
ಬುದ್ಧಿಯೋಗವೆನ್ನಿಂದುಕ್ತವೊ ನಿನಗಿದ್ದ್ಹಂತಿಯೊಳಗಾವನು ಇದನೆ ೨

ಅರಿತಪರೋಕ್ಷ ಜ್ಞಾನಿಯಾಗಿ ಕೃತಕೃತ್ಯನು - ಮುಕ್ತನು ತಾನಹನು
ಅರಿಯೆಂದೆನುತಲಿ ಇಂದಿರೇಶ ವಿಠಲೊರೆದನು ಕೇಳೈ ಫಲುಗುಣನೆ ೩
(೧೯-೨೦)

ಇತಿ ಗುಹ್ಯತಮಂ ಶಾಸ್ತ್ರ ಮಿದ ಮುಕ್ತಂ ಮಯಾನಘ
ಏತದ್ಬುದ್ಧ್ವಾ ಬುದ್ಧಿಮಾನ್ಸ್ಯಾತ್ ಕೃತಕೃತ್ಯಶ್ಚ ಭಾರತ ೨೦

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಪುರಾಣಪುರುಷೋತ್ತಮಯೋಗೋನಾಮ**
ಪಂಚದಶೋಽಧ್ಯಾಯಃ

---

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ **"ಗೀತಾರಂಜನಾ"**ಖ್ಯ ಗ್ರಂಥೇ
**ಪುರಾಣಪುರುಷೋತ್ತಮಯೋಗೋನಾಮ**
ಪಂಚದಶೋಽಧ್ಯಾಯಃ



ಹರಿಃ ಓಂ

# ಹದಿನಾರನೆಯ ಅಧ್ಯಾಯ

ಶ್ರೀ ಭಗವಾನುವಾಚ:—

ಅಭಯಂ ಸತ್ವ ಸ್ವಂಶುದ್ಧಿ ರ್ಜ್ಞಾನಯೋಗ ವ್ಯವಸ್ಥಿತಿಃ
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯ ಸ್ತಪ ಆರ್ಜವಂ ೧

ಅಹಿಂಸಾ ಸತ್ಯಮಕ್ರೋಧ ಸ್ತ್ಯಾಗ ಶ್ಶಾಂತಿ ರಪೈಶುನಮ್
ದಯಾ ಭೂತೇಷ್ವ ಲೋಲುತ್ವಂ ಮಾರ್ದವಂ ಹ್ರೀ ರಚಾಪಲಂ ೨

ತೇಜಃ ಕ್ಷಮಾ ಧೃತಿ ಶ್ಶೌಚ ಮದ್ರೋಹೋನಾತಿ ಮಾನಿತಾ
ಭವಂತಿ ಸಂಪದಂ ದೈವೀ ಮಭಿಜಾತಸ್ಯ ಭಾರತ ೩

---

ಅಷ್ಟಪದೀಗದ್ಯ:—

ನರನೆ ಕೇಳಭಯ ಸತ್ವದ ಶುದ್ಧಿ ಜ್ಞಾನಾಖ್ಯ
ವರಯೋಗದಲಿ ವ್ಯವಸ್ಥಿತಿಯು ಸತ್ಪಾತ್ರರಲಿ
ಪರಿಪರಿಯ ದಾನ ಮಾಡುವುದು ದಶ ಇಂದ್ರಿಯವ
ಭರದಿ ನಿಗ್ರಹ ಮಾಳ್ಪುದು

ವರ ಯಜ್ಞಗಳನೆ ಆಚರಿಸುತಿಪ್ಪುದು ಕೇಳು
ಮರಳಿ ಸ್ವಾಧ್ಯಾಯ ಪ್ರವಚನ ತಪವು ಋಜುತನವು
ವರ ಅಹಿಂಸಾ ಸತ್ಯವಕ್ರೋಧ ಮೌದಾರ್ಯ
ಹರಿಪಾದ ನಿಷ್ಕಾಮನವು ೧

ಮರಳಿ ಕೇಳ್ವೈ ಅಪೈಶುನಭಾವ ಸಾತ್ವೀಕ
ಪರಿಪರಿ ಪ್ರಾಣಿಮಾತ್ರದಿ ದಯಾ ವಿಷಯದಲಿ
ಜರಿದಂಥ ಸ್ನೇಹ ಮೃದುವಚನ ದುಷ್ಕಾರ್ಯದಲಿ
ಪರಮ ಲಜ್ಜಾಸ್ಥೈರ್ಯವೂ

ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯ ಮೇವಚ
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದ ಮಾಸುರೀಂ ೪

ದೈವೀ ಸಂಪದ್ವಿಮೋಕ್ಷಾಯ ನಿಬಂಧಾ ಯಾಸುರೀಮತಾ
ಮಾಶುಚಸ್ಸಂಪದಂ ದೈವೀ ಮಭಿಜಾತೋಽಸಿ ಪಾಂಡವ ೫

ದ್ವೌ ಭೂತ ಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವಚ
ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥಮೇ ಶೃಣು ೬

---

ಮರಳಿ ತೇಜ ಕ್ಷಮಾಧೃತಿ ಶೌಚ ಅದ್ರೋಹ
ನರರೊಳಗೆ ನಾ ಶ್ರೇಷ್ಠನೆಂಬ ಅಭಿಮಾನವನೆ
ಜರಿಯುವುದಿದೆಲ್ಲಮರ ಸಂಪತ್ಸ್ವಭಾವಸ್ಥ
ನರರಿಗಾಹುದು ಲಭ್ಯವೊ ೨
(೧-೩)

ದತಿ ದಂಭ ದರ್ಪ ಅಭಿಮಾನ ಪೌರುಷ ಕ್ರೋಧ
ಸತತ ಮಿಥ್ಯಾಜ್ಞಾನ ವೀ ಕೆಟ್ಟ ಗುಣಗಳೆ ಅ-
ಮಿತ ಅಸುರ ಪ್ರಕೃತಿಯಿಂ ಜನಿಸಿದ ನರರ
ಸತತ ಆಶ್ರೈಸಿಪ್ಪವೋ ೪

ಕ್ಷಿತಿಯೊಳಗೆ ದೈವಸಂಪತ್ತು ಮೋಕ್ಷಕೆ ಕಾರ
ಣಾತಿ ಮೂಢ ದೈತ್ಯಸ್ವಭಾವ ವಂಧಂತಮದಿ
ಅತಿ ದುಃಖವನುಭವಿಸುವುದಕೆ ಕಾರಣವೆನ್ನ
ಮತವಿದೆಂದನು ದೇವನು

ದೈವಸಂಪತ್ತಿನಲಿ ಜನಿಸಿದವ ನೀನನ್ಯ
ಭಾವಿಸುತ ಚಿಂತಿಸದಿರ್ದೈಯು ಪಾಂಡವನೆ ಕೇ
ಳ್ದೇವ ಆಸುರರೆಂಬ ದ್ವಿವಿಧ ವೀ ಲೋಕದಲಿ
ಜೀವ ವರ್ಗದ ಸೃಷ್ಟಿಯು ೫

ಪ್ರವೃತ್ತಿಂಚ ನಿವೃತ್ತಿಂಚ ಜನಾನವಿದುರಾಸುರಾಃ
ನಶೌಚಂ ನಾಪಿ ಚಾಚಾರೋ ನಸತ್ಯಂ ತೇಷು ವಿದ್ಯತೇ ೭

ಅಸತ್ಯ ಮಪ್ರತಿಷ್ಠಂತೇ ಜಗದಾಹು ರನೀಶ್ವರಮ್
ಅಪರಸ್ಪರ ಸಂಭೂತಂ ಕಿಮನ್ಯತ್ಕಾಮ ಹೈತುಕಂ ೮

---

ದೈವಸಂಪತ್ತಿನವರರಿವ ವಿಸ್ತರದಿಂದ
ಈ ವಿಧದಿ ಪೂರ್ವದಲಿ ಉಕ್ತವಾಯ್ತಿನ್ನಿಂದ
ಆವ ನರನೀ ಗುಣಗಳಿಂದ ಯುಕ್ತನೊ ಅವನು
ಪಾವನನು ಧರೆಯೊಳೆಂದ ೬

ಪದ ಆದಿತಾಳ

ಅಸುರ ಸ್ವಭಾವಯುತರ ಲಕ್ಷಣನಿನ ಗುಸುರುವೆ ಪಾಂಡವನೆ ಕೇಳೈ ಪ

ವಸುಧೆಯೊಳಿಹರೈ ಈ ವಿಧ ಬಹು ತಾಮಸರಿವರು ಅಜ್ಞಾನಿಗಳೆಂದರಿ ಅ.

ವರ ಸು ಪ್ರವೃತ್ತಿ ನಿವೃತ್ತಿಯ ಮಾರ್ಗವ ಅರಿಯರು ಕೇಳಿವರು
ಮೆರೆವ ಅಸುರ ಸಂಪದದಲಿ ಜನಿಸಿದ ನರರೆಂದರಿ ಇವರು
ಪರಮ ಸತ್ಯವಾಕ್ಶುಚಿ ಆಚಾರಗಳಿರವೀ ವಿಧ ಮಾ
ನವರಿಗೆ ಯೆಂದೆಂದಸುರ ಸ್ವಭಾವ ೧

ಜಗದ ಸತ್ಯ ಅಪ್ರತಿಷ್ಠಿತೆನ್ನುತ ಬಗುಳುವ ಹೀಗೆಲ್ಲ
ಜಗದೀಶ್ವರನಿಲ್ಲೆಂದೀ ಲೋಕಕೆ ಪ್ರಕೃತ್ಯಾದಿಗಳ ಕಾರಣವಲ್ಲೆಂದು
ಜಗದುದಯಕೆ ಕಾಮಹೇತುವ ವಿದ್ಯೆಯೆ
ಕಾರಣವೆಂದ್ಹೇಳ್ವರು ಪಾಷಂಡರು ೨

ಈ ಪರಿ ಜ್ಞಾನವ ನಾಶ್ರೈಸಿದ ಮಹ ಪಾಪಾತ್ಮರೊ ಇವರು
ಈ ಪುರುಷರು ನಷ್ಟಾತ್ಮರಲ್ಪಮತಿ ಈ ಪೃಥ್ವಿಯೊಳಿವರೂ
ತಾಪಸ್ಸೈದಿ ಕೆಡಲೋಸುಗ ಹುಟ್ಟಿಹ
ರೀಪರಿ ಜಗಕಹಿತೋಗ್ರ ಕರ್ಮಿಗಳು ೩

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪ ಬುದ್ಧಯಃ
ಪ್ರಭವಂತ್ಯುಗ್ರ ಕರ್ಮಾಣಃ ಕ್ಷಯಾಯ ಜಗತೋಽಹಿತಾಃ ೯

ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನ ಮದಾನ್ವಿತಾಃ
ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ ಪ್ರವರ್ತಂತೇಽಶುಚಿ
[ವ್ರತಾಃ ೧೦

ಚಿಂತಾಮಪರಿಮೇಯಾಂಚ ಪ್ರಲಯಾಂತಾ ಮುಪಾಶ್ರಿತಾಃ
ಕಾಮೋಪಭೋಗ ಪರಮಾ ಏತಾವದಿತಿ ನಿಶ್ಚಿತಾಃ ೧೧

ಆಶಾಪಾಶ ಶತೈರ್ಬದ್ಧಾಃ ಕಾಮಕ್ರೋಧ ಪರಾಯಣಾಃ
ಈಹಂತೇ ಕಾಮಭೋಗಾರ್ಥ ಮನ್ಯಾಯೇನಾರ್ಥ ಸಂಚಯಾನ್ ೧೨

---

ತುಂಬದ ಬಯಕೆಗಳಾಶ್ರೈಸನುದಿನ ದಂಭ ಮಾನ ಮದದೀ
ಇಂಬುಗೊಂಡ ಸದ್ಗ್ರಾಹ್ಯ ಅಶುಚಿವ್ರತ ಹಂಬಲಿಸುತ ಮನದೀ
ವಿಭ್ರಮದಿಂದುಗ್ರಹಿಸ್ಯಾಚರಿಪರೊ
ಕುಂಭಿಣಿಯೊಳಗೀದೃಶ ಅಶುಚಿವ್ರತರು ೪

ಪರಿಮಿತವಿಲ್ಲದ ಪ್ರಳಯಾಂತ ಚಿಂತೆಯನಾಶ್ರೈಸಿರುತಿಹರೊ
ಪರಿಪರಿ ವಿಷಯದ ಕಾಮೋಪ ಭೋಗವೆ ಪರಮವಿದೆಂದೆನುತ
ಆರಿತೀವಿಧ ನಿಶ್ಚೈಸುತ ಜನರಿಗೆ
ಅರುಹುವರಿದು ಹೊರತುತ್ತಮವಿಲ್ಲೆಂದು ೫

ಘನತರ ಆಶಾಪಾಶ ಶತಗಳಿಂದನುದಿನಬಂಧಿತರು
ಅನುಪಮ ಕಾಮಕ್ರೋಧ ಪರಾಯಣ ರನಘನೆ ಕೇಳವರು
ಘನ ಕಾಮದ ಭೋಗಾರ್ಥನ್ಯಾಯದಿ
ಧನ ಸಂಚಯ ಮಾಡುತಲಿಹರೀ ವಿಧ ೬

ಇದಮದ್ಯಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಂ
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಂ ೧೩

ಅಸೌ ಮಯಾಹತ ಶ್ಶತ್ರುರ್ಹನಿಷ್ಯೇ ಚಾಪರಾನಪಿ
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ೧೪

---

ಇಂದಿರೇಶ ವಿಠಲನ ದ್ವೇಷಿಗಳಿವರೆಂದರಿ ಪಾಂಡವನೆ
ಮುಂದ್ಹೇಳುವೆ ಈ ವಿಧರ ಲಕ್ಷಣವ ಛಂದದಿ ಕೇಳಿದನೆ
ಮಂದಮತಿಗಳಿವರೆಂದಿಗು ಸಜ್ಜನ
ರಿಂದಲಿ ನಿಂದಿತರಾದವರೆಂದರಿ ೬

೭-೧೨

ಷಟ್ಪದೀ:—

ಇದನು (ಇದು) ಎನ್ನಿಂದೀಗ ಲಬ್ಧವು
ಇದು ಮನೋರಥ ಪಡೆವೆನಾ ಮುಂ
ದಿದು ಎನಗೆ ಈಗುಂಟು ಮರಳೀ ವಿವಿಧ ಧನವೆನಗೇ
ಸದ ದೊರಕುತಿಹದೆಂದು ನಿಶ್ಚೈ
ಸಿದ ದುರಾತ್ಮರು ಆಸುರರ ಸಂ
ಪದಕೆ ಸೇರ್ದವರೆಂದು ತಿಳಿಯೆಂದನು ಮುರಧ್ವಂಸೀ ೧೩

ಎನ್ನ ದೆಸೆಯಿಂದಳಿದ ನೀ ಹಗೆ
ಇನ್ನುಳಿದ ಹಗೆಗಳನು ಕೊಲ್ಲುವೆ
ನೆನ್ನುತಲಿ ಪರಮೇಶ್ವರನು ತಾವೆಂದರಿದು ಜಗದಿ
ಭಿನ್ನ ಭೇದವನರಿಯುದಧಮರು
ಕುನ್ನಿಯಂದದಿ ಮತಿವಿಹೀನರು
ಘನ್ನ ಭೋಗಿ ಬಲಿಷ್ಠ ಸುಖಿನಾ ಸಿದ್ಧನೆಂಬುವರು ೧೪

ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನ ವಿಮೋಹಿತಾಃ ೧೫

ಅನೇಕ ಚಿತ್ತ ವಿಭ್ರಾಂತಾ ಮೋಹಜಾಲ ಸಮಾವೃತಾಃ
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ೧೬

ಆತ್ಮಸಂಭಾವಿತಾಸ್ಸ್ತಬ್ಧಾ ಧನಮಾನ ಮದಾನ್ವಿತಾಃ
ಯಜಂತೇ ನಾಮ ಯಜ್ಞೈಸ್ತೇ ದಂಭೇನಾವಿಧಿಪೂರ್ವಕಂ ೧೭

---

ಜನರೊಳಾಢ್ಯನು ಸತ್ಕುಲಜ ನಾ
ನೆನಗೆ ಸರಿಮಿಗಿಲ್ಯಾರು ಲೋಕದ
ಮನುಜರೊಳು ಯಜ್ಞಗಳ ಮಾಡುವೆ ದಾನ ಮಾಡುವೆನು
ಅನುದಿನದಿ ಮೋದಿಸುವೆ ನಾನೆಂ
ದೆನುತ ಈ ಅಜ್ಞಾನ ಮೋಹದ
ವನಧಿಯಲಿ ಮುಳುಗಿಪ್ಪರಾಸುರ ಜನರು ಕೇಳೆಂದ ೧೫

ಹಲವು ಪರಿ ವಿಭ್ರಾಂತ ಚಿತ್ತರು
ಬಲಿದ ಮೋಹದ ಬಲೆಯೊಳಗೆ ನೆರೆ
ಶಿಲುಕಿ ಕಾಮದ ಭೋಗದೊಳಗಾಸಕ್ತರಾದವರು
ಮಲಗಳಿಂದಲಿ ಯುಕ್ತ ಅಶುಚಿ
ಸ್ಥಲನೆನಿಪ ನರಕದಲಿ ಬೀಳುವ
ರೆಲೆ ಧನಂಜಯ ಆಸುರ ಪ್ರಕೃತಿಗಳು ಕೇಳೆಂದ ೧೬

ತಮ್ಮ ತಾವ್ ಶ್ಲಾಘನೆಯ ಮಾಡುತ
ಹೆಮ್ಮಮತೆಯಿಂದಿಹರು ಸ್ತಬ್ಧರು
ಇಮ್ಮಹಿಯೊಳೀದೃಶರು ಧನಮಾನದಿ ಮದಾನ್ವಿತರು
ದುರ್ಮತಿಗಳತಿ ನಾಮ ಮಾತ್ರಕೆ
ಕರ್ಮ ಯಜ್ಞಗಳ್ಯಜಿಸುತಿಹಲೆರೆ
ಧರ್ಮನನುಜನೆ ದಂಭದಿಂದಲಿ ಅವಿಧಿಯುತರಾಗಿ ೧೭

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂಚ ಸಂಶ್ರಿತಾಃ
ಮಾಮಾತ್ಮ ಪರದೇಹೇಷು ಪ್ರದ್ವಿಷಂತೋಽಭ್ಯ ಸೂಯಕಃ ೧೮

ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್
ಕ್ಷಿಪಾಮ್ಯಜಸ್ರಮ ಶುಭಾನಾಸುರೀಷ್ವೇವ ಯೋನಿಷು ೧೯

ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂಗತಿಂ ೨೦

---

ನಿರುತ ಹಮ್ಮನೆ ಬಲವು ದರ್ಪವು
ಪರಮ ಕಾಮವು ಕ್ರೋಧವೆಂಬೀ
ಪರಿಯನಾಶ್ರೈಸುತ ಕುಜೀವಿಗಳನವರತ ಎನ್ನಾ
ಪರರ ದೇಹಸ್ವದೇಹದೊಳಗಿರು
ತಿರಲು ದ್ವೇಷಿಪರೆನ್ನ ಸೂಯದಿ
ನಿರತರಾಗಿಹ ರಾಸುರ ಪ್ರಕೃತಿಗಳು ಕೇಳೆಂದ ೧೮

ಇನಿತು ಮದ್ವೇಷವನೆ ಮಾಡುವ
ಮನುಜರೊಳಗಧಮರನೆ ಕ್ರೂರರ
ಅನುದಿನದಿ ಸಂಸಾರದಲಿ ನೂಕುವೆನು ನಾ ಮರಳೀ
ಘನ ಅಮಂಗಳ ಪ್ರಕೃತಿಯುತರನೆ
ದನುಜ ಸಂಬಂಧಿಗಳ ಯೋನಿಲಿ
ಜನನ ಕೊಡುತಿಹೆ ಜನುಮ ಜನುಮದೊಳೆಂದನಸುರಾರಿ ೧೯

ಜನುಮ ಜನುಮದಿ ಅಸುರ ಯೋನಿಲಿ
ಜನಿಸಿ ಮೂಢರು ಎನ್ನನೈದದೆ
ಇನಿತು ಮದ್ವೇಷಾಭಿವೃದ್ಧಿಸುತಿರಲು ಬಳಿಕವರು
ಅನಘ ಕೇಳಂಥಂತಮವ ಈ
ಮನುಜರೈದುತಲಿಹರು ಎಂದಿಗು
ಪುನಹ ಮರಳರು ಅಧಮ ಗತಿಯಿದು ಎಂದನಸುರಾರಿ ೨೦

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನ ಮಾತ್ಮನಃ
ಕಾಮಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ೨೧

ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈ ಸ್ತ್ರಿಭಿರ್ನರಃ
ಆಚರತ್ಯಾತ್ಮನಶ್ಶ್ರೇಯಸ್ತತೋಯಾತಿ ಪರಾಂಗತಿಂ ೨೨

ಯಶ್ಶಾಸ್ತ್ರ ವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ
ನಸಸಿದ್ಧಿ ಮವಾಪ್ನೋತಿ ನಸುಖಂ ನಪರಾಂಗತಿಂ ೨೩

---

ಆರ್ಯಾ:—

ತ್ರಿವಿಧವು ನರದ್ವಾರ ತನ್ನ ಕೆಡಿಸುವುದಕೆ ಕಾರಣವಾಗಿಹುದು
ವಿವಿಧ ಬಯಕೆ ಕ್ರೋಧ ಲೋಭವು ಈ ಭವದಲಿ ಜೀವರ ಕೆಡಹುವುದು ೧

ಅದುಕಾರಣ ಮೋಕ್ಷೇಪ್ಸುಗಳಿಂದೀವಿಧ ಮೂರ್ಗುಣಗಳು ತ್ಯಜಿಸುವುದೂ
ಮೊದಲು ನಿರಯದಾದ್ವಾರವಾದ ಈ ವಿಧ ಮೂರಿಂ ಬಿಡುಗಡೆ ಪಡೆದೂ ೨

ನರನು ತನ್ನ ಶ್ರೇಯಸ್ಸನೆ ತಾನಾಚರಿಸುತ ಕೇಳ್ಬೆ ಬಳಿಕವನೂ
ಪುರುಷೋತ್ತಮನು ಗತಿಯನೆ ಐದುವನೈ ಧರೆಯೊಳಾವ ಪುರುಷನು ಇದನೂ ೩

ಅರಿಯದೆ ಶಾಸ್ತ್ರದ ವಿಧಿಯು ಬಿಟ್ಟು ಅನವರತ ಕಾಮಕಾರಕನಾಗೀ
ಚರಿಸುವನರ ಸಿದ್ಧಿಯನೈದನು ಕೇಳ್ಪರಮಗತಿಯ ಸುಖವನೆ ನೀಗಿ ೪

ಸದ ಕರ್ತವ್ಯ ಅಕರ್ತವ್ಯ ವಿಭಾಗದ ವ್ಯವಸ್ಥೆಯನೆ ಶಾಸ್ತ್ರದಲಿ
ವಿಧಿಸಿದ ವಚನವು ನಿನಗೆ ಪ್ರಮಾಣವೊ ಅದುಕಾರಣ ಇಹಲೋಕದಲೀ ೫

ವರ ಶಾಸ್ತ್ರ ವಿಧಾನೋಕ್ತವು ನಿತ್ಯದಿ ಅರಿತು ಕರ್ಮ ಮಾಡಲು ನೀನು
ಅರಹನೆಂದು ಇಂದಿರೆಪತಿ ವಿಠ್ಠಲ ನೊರೆದ ಹೀಗೆ ಕೇಳ್ಬೆ ನೀನು ೬

೨೧-೨೪

ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯ ವ್ಯವಸ್ಥಿತೌ
ಜ್ಞಾತ್ವಾ ಶಾಸ್ತ್ರ ವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ ೨೪

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ದೈವಾಸುರಸಂಪದ್ವಿಭಾಗಯೋಗೋನಾಮ**
ಷೋಡಶೋಧ್ಯಾಯಃ

---

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ **"ಗೀತಾರಂಜನಾ"**ಖ್ಯ ಗ್ರಂಥೇ
**ದೈವಾಸುರಸಂಪದ್ವಿಭಾಗಯೋಗೋನಾಮ**
ಷೋಡಶೋಧ್ಯಾಯಃ



ಹರಿಃ ಓಂ

## ಹದಿನೇಳನೆಯ ಅಧ್ಯಾಯ

ಅರ್ಜುನ ಉವಾಚ:—

ಯೇ ಶಾಸ್ತ್ರ ವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ
ತೇ ಷಾಂ ನಿಷ್ಠಾತು ಕಾಕೃಷ್ಣ ಸತ್ತ್ವಮಾಹೋ ರಜಸ್ತಮಃ ೧

ಶ್ರೀ ಭಗವಾನುವಾಚ:—

ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾಸ್ವಭಾವಜಾ
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ೨

---

ಷಟ್ಪದೀ

ಅರ್ಜುನ:—

ಆವ ಕೆಲವರು ಶಾಸ್ತ್ರ ವಿಧಿಯನೆ
ತಾ ವಹಿಸದಲೆ ಬಿಟ್ಟು ಭಕ್ತಿಯ
ಭಾವದಿಂದಲಿ ಯುಕ್ತ ನಿನ್ನನು ಭಜಿಸಲನುದಿನದೀ
ಈ ವಿಧರು ರಾಜಸರೊ ಸತ್ವಸ್ವ
ಭಾವ ಯುಕ್ತರೊ ತಾಮಸರೊ ಸ್ಥಿತಿ
ಆವುದೆನಗದು ಕರುಣದಲಿ ಹೇಳೆಂದನಾ ಪಾರ್ಥ ೧

ಷಟ್ಪದೀ ರೂಪಕತಾಳ

ಶ್ರೀ ಭಗವಾನುವಾಚ:—

ಕುರುಕುಲೋತ್ತಮ ದೇಹಿಗಳಿಗೆ ತ್ರಿವಿಧದಿ ಶ್ರದ್ಧೆ
ಇರುತಿಹುದು ಅದು ತತ್ಸ್ವಭಾವಜವೊ ಕೇಳದನೆ
ಪರಮ ಸಾತ್ವಿಕ ಶ್ರದ್ಧೆ ರಾಜಸ ಶ್ರದ್ಧೆ ತಾಮಸ ಶ್ರದ್ಧೆ
[ಯೆಂದೆನುತಲಿ

ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ
ಶ್ರದ್ಧಾಮಯೋಽಯಂ ಪುರುಷೋ ಯೋಯಚ್ಛ್ರದ್ಧಃ ಸ ಏವಸಃ ೩

---

ನಿರುತ ಜೀವಾನುರೂಪದಿ ಶ್ರದ್ಧೆಯಾಹದೈ
ನರರಿಗೆಲ್ಲರಿಗು ಶ್ರದ್ಧಾ ಸ್ವರೂಪಿಗಳೆಲ್ಲ
ಪುರುಷರದರೊಳಗಾವನೇ ದ್ವಿವಿಧ ಶ್ರದ್ಧೆಯುಳ್ಳವನೊ
[ಅವನವನು ಕೇಳೈ ೨

ಹರಿಭಕ್ತರೆಂದರಿತು ದೇವತೆಗಳನೆ ಭಜಿಸು
ತಿರುವರೈ ಸಾತ್ವಿಕ ಪ್ರಾಣಿಗಳು ಭಕ್ತಿಯಲಿ
ಹರಿ ಸರ್ವ ಶ್ರೇಷ್ಠನೆಂಬಲ್ಲಿ ಸಂಶಯದಿಂದ ಸುಮನಸರ
[ಶ್ರದ್ಧೆಯಿಂದ

ನಿರುತ ರಾಜಸರು ಭಜಿಸುವರ್‍ಯಕ್ಷರಾಕ್ಷಸರ
ಸರಸಿಜಾಸನ ಭವೇಂದ್ರಾದಿ ನಾಮಕರು, ಸ್ವೀ
ಕರಿಸುತಿಪ್ಪರು ಆದ್ದರಿಂದ್ಯಕ್ಷ ರಾಕ್ಷಸಗು ಯಜಿಸುತಿಹರೆಂದು
[ತಿಳಿಯೊ

ಹರಿಗೆ ನಿರ್ಜರರು ಸಮರೆಂದು ತಾಂ ಹರಿಯೆಂದು
ಸುರರಿಂದ ನೀಚ ಹರಿಯೆಂದು ನಿರ್ಜರರೆಲ್ಲ
ಹರಿಯೆಂದು ಭಾವಿಸುತ ಶ್ರದ್ಧೆಯಿಂ ಭಜಿಸುವರು ತಾಮಸರು
[ಇವರ ಪೂಜೆ

ಪರಿಪರಿಯ ಶಿವಗಣಪಸ್ಕಂಧಾದಿ ನಾಮದಿಂ
ದಿರುವ ಸಾಕ್ಷಾಚ್ಛಿವನ ಪರಿವಾರ ಭೂತಪ್ರೇ
ತರು ಸ್ವೀಕರಿಸುವರೈ ಯದುಕಾರಣದಿ ಭೂತಪ್ರೇತರನೆ
[ಯಜಿಸುತಿಹರೊ ೩

ಯಜಂತೇ ಸಾತ್ತ್ವಿಕಾ ದೇವಾನ್ ಯಕ್ಷ ರಕ್ಷಾಂಸಿ ರಾಜಸಾಃ
ಪ್ರೇತಾನ್ ಭೂತ ಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ೪

ಅಶಾಸ್ತ್ರ ವಿಹಿತಂ ಘೋರಂ ತಪ್ಯಂತೇ ಯೇ ತಪೋಜನಾಃ
ದಂಭಾಹಂಕಾರ ಸಂಯುಕ್ತಾಃ ಕಾಮರಾಗ ಬಲಾನ್ವಿತಾಃ ೫

ಕರ್ಶಯಂತಶ್ಶರೀರಸ್ಥಂ ಭೂತಗ್ರಾಮ ಮಚೇತಸಃ
ಮಾಂ ಚೈವಾಂತ ಶ್ಶರೀರಸ್ಥಂ ತಾನ್ ವಿದ್ಧ್ಯಸುರ ನಿಶ್ಚಯಾನ್ ೬

ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋಭವತಿ ಪ್ರಿಯಃ
ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ೭

---

ಅಷ್ಟಪದೀಗದ್ಯ:—

ಯಾರು ತಪವನೆ ಮಾಳ್ಪ ಜನರು ದಂಭದಿ ಅಹಂ
ಕಾರದಿಂ ಕಾಮರಾಗದ ಬಲದಿ ಸಂಯುಕ್ತ
ಮೀರಿ ಅನುದಿನದಿ ಸಚ್ಛಾಸ್ತ್ರ ವಿಹಿತವ ಅಮಿತ
ಘೋರ ತಪವನೆ ಮಾಳ್ಪರೊ

ವೀರ ಕೇಳ್ಳೆ ಅಚೇತಸ್ಥರು ಶರೀರಸ್ಥ
ವಾರಿಜಾಸನ ಮುಖ್ಯ ತತ್ವಾಭಿಮಾನಿಗಳ
ಶಾರಿರಾಂತಸ್ಥನ್ನ ಅಲ್ಪಗುಣಿಯೆಂದರಿವ ಕ್ರೂರರಾ
[ಸುರರೆಂದರಿ ೫-೬

ಪದ ಅಟತಾಳ

ಸರ್ವರಿಗಾಹಾರ ತಪಯಜ್ಞ ದಾನಗ
ಳುರ್ವಿಯೊಳಗೆ ಮೂರು ವಿಧದಿ
ಸರ್ವಕಾಲದಿ ಪ್ರಿಯವಾಗಿಪ್ಪದೈಯ ಅ
ಪೂರ್ವ ಹೇಳುವೆನು ಕೇಳಿದನೆ

ಆಯುಸ್ಸತ್ತ್ವ ಬಲಾರೋಗ್ಯ ಸುಖಪ್ರೀತಿ ವಿವರ್ಧನಾಃ
ರಸ್ಯಾಸ್ಸ್ನಿಗ್ಧಾಸ್ಸ್ಥಿರಾಹೃದ್ಯಾ ಆಹಾರಾಸ್ಸಾತ್ತ್ವಿಕ ಪ್ರಿಯಾಃ ೮

ಕಟ್ವಮ್ಲ ಲವಣಾತ್ಯುಷ್ಣ ತೀಕ್ಷ್ಣ ರೂಕ್ಷ ವಿದಾಹಿನಃ
ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯ ಪ್ರದಾಃ ೯

ಯಾತಯಾಮಂ ಗತರಸಂ ಪೂತಿ ಪರ್ಯುಷಿತಂಚ ಯತ್
ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಂ ೧೦

---

ಬಲವು ಆರೋಗ್ಯ ಸುಖವು ಸಾಧುಭಾವ ನಿ
ರ್ಮಲವಾಗಿ ಪ್ರೀತಿ ಹೆಚ್ಚಿಸುವ
ಲಲಿತ ಸ್ನಿಗ್ಧವು ರಸ್ಯಾಹೃದ್ಯ ಸ್ಥಿರಗುಣದಾಹಾ
ರಿಳೆಯೊಳು ಪ್ರಿಯ ಸಾತ್ವಿಕರಿಗೆ ೮

ಮೊದಲು ಭೋಗಿಸುವಾಗ ದುಃಖ ಬಳಿಕ ಶೋಕ
ತದನಂತರದಿ ರೋಗ ಕೊಡುವ
ವಿಧವಿಧ ಖಾರಕಹಿ ಲವಣಾಮ್ಲ ರೂಕ್ಷ ವಿ
ವಿಧ ತೀಕ್ಷ್ಣ ಬಿಸಿದಾಹಜನಕಾ

ಪರಿಪರಿ ಆಹಾರಗಳು ರಾಜಸಗೆ ಇಷ್ಟ
ಮರಳಿ ಹೇಳುವೆನು ತಾಮಸಗೆ
ನಿರುತತಿ ಪ್ರಿಯವಾದ ಆಹಾರಗಳ ನಿನ
ಗೊರೆವೆ ಯಾಮವನೆ ಮೀರಿರುವಾ- ೯

ಆರಿದ್ದು ಹಳಸಿದ್ದು ಗತರಸವಾಗಿದ್ದು
ನಾರುತಿದ್ದುದು ಉಚ್ಛಿಷ್ಟಗಳೂ
ಮೀರಿದ ಅಪವಿತ್ರ ಭೋಜನ ಪ್ರಿಯ, ಮದ
ವೇರಿದ ತಾಮಸ ಜನಕೆ ೧೦

ಅಫಲಾ ಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ
ಯಷ್ಟವ್ಯ ಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ೧೧

ಅಭಿಸಂಧಾಯತು ಫಲಂ ದಂಭಾರ್ಥ ಮಪಿಚೈವಯತ್
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿರಾಜಸಂ ೧೨

ವಿಧಿಹೀನ ಮಸೃಷ್ಟಾನ್ನಂ ಮಂತ್ರಹೀನ ಮದಕ್ಷಿಣಂ
ಶ್ರದ್ಧಾ ವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ೧೩

ದೇವ ದ್ವಿಜಗುರು ಪ್ರಾಜ್ಞ ಪೂಜನಂ ಶೌಚಮಾರ್ಜವಂ
ಬ್ರಹ್ಮಚರ್ಯ ಮಹಿಂಸಾಚ ಶಾರೀರಂ ತಪ ಉಚ್ಯತೇ ೧೪

---

ಶ್ರುತಿ ವಿಹಿತ ಕರ್ಮ ಕರ್ತವ್ಯವೆನುತಲಿ
ಮತಿಯಿಂದ ನಿರ್ಧರಿಸುತಲೀ
ಸತತ ತತ್ಫಲ ಕಾಂಕ್ಷೆಯಿಲ್ಲದೆ ಮಾಡುವ
ಕ್ರತು ಸಾತ್ವಿಕ ಯಜ್ಞ ತಿಳಿಯೊ ೧೧

ಫಲದನುಸಂಧಾನದಿಂದ ಡಂಭಾರ್ಥದಿ
ಇಳೆಯೊಳು ಮಾಳ್ಪ ಯಜ್ಞಗಳು
ತಿಳಿಯಾವುದದು ರಾಜಸ ಯಜ್ಞವಹುದೆಂ
ದೆಲೆ ಪಾಂಡುತನಯ ಹೇಳುವರೊ ೧೨

ವಿಧಿಹೀನ ವೇದಮಂತ್ರಗಳಿಲ್ಲ ಭಕ್ತಿಯು
ಮೊದಲಿಲ್ಲ ಸತ್ಪಾತ್ರ ಜನಕೆ
ತುದಿಗನ್ನ ದಾನಗಳಿಲ್ಲ ದಕ್ಷಿಣೆಗಳಿ
ಲ್ಲದೆ ಮಾಳ್ಪ ಯಜ್ಞ ತಾಮಸವೊ ೧೩

ದೇವ ಬ್ರಾಹ್ಮಣ ಗುರು ಪ್ರಾಜ್ಞರಾರಾಧನೆ
ಭಾವಶುದ್ಧಿಯು ಋಜುತನವೂ
ಆ ವಿಮಲ ಬ್ರಹ್ಮಚರ್ಯೆಯು ಹಿಂಸೆಯು
ಇವು ದೈಹಿಕವಾದ ತಪವೊ ೧೪

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯ ಹಿತಂಚಯತ್
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ೧೫

ಮನಃ ಪ್ರಸಾದ ಸೌಮ್ಯತ್ವಂ ಮೌನಮಾತ್ಮ ವಿನಿಗ್ರಹಃ
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ೧೬

ಶ್ರದ್ಧಯಾ ಪರಯಾತಪ್ತಂ ತಪಸ್ತತ್ತ್ರಿವಿಧಂ ನರೈಃ
ಅಫಲಾ ಕಾಂಕ್ಷಿಭಿರ್ಯುಕ್ತೈ ಸ್ಸಾತ್ತ್ವಿಕಂ ಪರಿಚಕ್ಷತೇ ೧೭

ಸತ್ಕಾರಮಾನ ಪೂಜಾರ್ಥಂ ತಪೋದಂಭೇನ ಚೈವ ಯತ್
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮ ಧ್ರುವಂ ೧೮

---

ಉದ್ವೇಗ ಕರವಲ್ಲದ ಸತ್ಯ ಪ್ರಿಯ ಹಿತ
ಸದ್ವಾಣಿ ವೇದ ಶಾಸ್ತ್ರಗಳ
ಅಧ್ಯಯನ ಅಭ್ಯಾಸಾದಿಗಳೆಲ್ಲ ಸುಪ್ರ-
ಸಿದ್ಧ ವಾಙ್ಮಯ ತಪವೆನಿಕುಂ ೧೫

ಮನವು ವಿಷಯಗಳಲೆರಗದಿಹುದು ಕ್ರೌರ್ಯ
ವನು ತಳೆಯದಲಿರುತಿಹುದು
ಮನದ ಸಂಶುದ್ಧಿಯು ಹರಿಭಕ್ತಿ ಸ್ಥಿರತೆಯು
ಮನಸಿನ ತಪವೆನಿಸುವುದು ೧೬

ಪರಮ ಶ್ರದ್ಧೆಯಲಿ ತತ್ಫಲ ಕಾಂಕ್ಷಿಸದ ಯುಕ್ತ
ನರರಿಂದಾಚರಿಪ ತತ್ರಿವಿಧಾ
ವರ ಸಮೀಚೀನ ತಪಗಳು ಸಾತ್ವಿಕವೆಂ
ದರಿತವರೆಲ್ಲ ಹೇಳುವರೊ ೧೭

ಪರಿಪರಿ ಮನ್ನಣೆ ಸತ್ಕಾರ ಪೂಜೆಗೋ
ಸ್ಕರ ಡಂಭದಿಂದಾಚರಿಸುವ
ವರ ತಪವವಧ್ರು ಚಲಿಪ ಫಲದವದು
ನರನೆ ರಾಜಸವೆನಿಸುವುದೊ ೧೮

ಮೂಢ ಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ
ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸ ಮುದಾಹೃತಂ ೧೯

ದಾತವ್ಯ ಮಿತಿ ಯದ್ದಾನಂ ದೀಯತೇಽನುಪಕಾರಿಣೇ
ದೇಶೇ ಕಾಲೇಚ ಪಾತ್ರೇಚ ತದ್ದಾನಂ ಸಾತ್ವಿಕಂ ಸ್ಮೃತಂ ೨೦

ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯವಾ ಪುನಃ
ದೀಯತೇಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಂ ೨೧

ಅದೇಶಕಾಲೇ ಯದ್ದಾನ ಮಪಾತ್ರೇಭ್ಯಶ್ಚ ದೀಯತೇ
ಅಸತ್ಕೃತಮವಜ್ಞಾತಂ ತತ್ತಾಮಸ ಮುದಾಹೃತಂ ೨೨

---

ಮೂಢತನದ ದುರಾಗ್ರಹದಿ ಪರರಿಗತಿ
ಪೀಡಿಸಲೋಸುಗ ತನುವ
ಬಾಡಿಸಿ ಮಾಡುವ ತಪವು ತಾಮಸವೆಂದು
ರೂಢವಾಗಿಹುದೊ ಈ ಜಗದಿ ೧೯

ಘನ ದಾನಗಳು ಹರಿ ಪ್ರೀತ್ಯರ್ಥ ದಾತವ್ಯ
ವೆನುತ ನಿಶ್ಚೈಸಿ ದಾನವನು
ತನಗುಪಕಾರ ಮಾಡದ ಪಾತ್ರನಿಗೆ ದೇಶ
ವನು ಕಾಲವರಿತು ಕೊಡುತಿಹ

ದಾನಂಗಳಾವುವೊ ಅವುಗಳ ಸಾತ್ವಿಕ
ದಾನಗಳೆಂದ್ಹೇಳುತಿಹರೊ
ಹೀನರಾಜಸ ತಾ-ಮಸ ದಾನಗಳ ವಿ
ಧಾನ ಕೇಳಿನ್ನು ಹೇಳುವೆನು ೨೦

ತನಗೊಂದು ಪ್ರತ್ಯುಪಕಾರ ಗೋಸ್ಕರ ಮತ್ತು
ಮನದಿ ತತ್ಫಲವಪೇಕ್ಷಿಸುತ
ಜನರ ಕಾಡಿಸಿ ಗಳಿಸಿದ ಧನದಿಂ ಮಾಳ್ಪು
ದನಘ ರಾಜಸವೆನಿಸುವುದೊ ೨೧

ಓಂ ತತ್ಸ ದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧ ಸ್ಸ್ಮೃತಃ
ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ೨೩
ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನ ತಪಃ ಕ್ರಿಯಾಃ
ಪ್ರವರ್ತಂತೇ ವಿಧಾನೋಕ್ತಾ ಸ್ಸತತಂ ಬ್ರಹ್ಮವಾದಿನಾಂ ೨೪

---

ದಾನಸತ್ಪಾತ್ರರಿಗಪವಿತ್ರ ದೇಶದಿ
ಹೀನ ಕಾಲಗಳಲಿ ವಿಹಿತ
ವೇನು ನೋಡದೆ ಅಸತ್ಕಾರ ನಿಂದೆಯು ಅವ
ಮಾನ ಪೂರ್ವಕಧಿಕ್ಕರಿಸುತ
ಇಂದಿರೇಶ ವಿಠಲನಿಗರ್ಪಿತವು ಆಗ
ಲೆಂದು ಚಿಂತಿಸದೆ ಮಾಡುತಿಹಾ
ಮಂದಮತಿಗಳ ದಾನಗಳಾವುವೊ ಅವು
ನಿಂದ್ಯಾ ತಾಮಸವೆನಿಸುವುವೊ ೨೨

ಷಟ್ಪದೀ ತ್ರಿಪುಟತಾಳ

ವರ ಪರಬ್ರಹ್ಮನಿಗೆ ನಾಮವು
ನರನೆ ಕೇಳ್ವೈ ಮೂರು ವಿಧವಾ
ಗಿರುತಿಹುದು ಓಂ ತತ್ಸದೀತೆರವಾಗಿ ಪೂರ್ವದಲಿ
ಪರಮನಾವ ತಚ್ಛಬ್ದ ವಾಚ್ಯನಾ
ದ್ದರಿಯ ದೆಸೆಯಿಂದ್ಯಜ್ಞಗಳು ಭೂ
ಸುರರು ವೇದಗಳೆಲ್ಲ ವಿಹಿತಗಳೆಂದೆನಿಸುತಿಹವೈ ೨೩

ಆದು ನಿಮಿತ್ತೋಂ ಎಂದು ಪೊಗಳುತ
ಸದಮಲಾತ್ಮಕ ಬ್ರಹ್ಮವಾದಿಗ
ಳದನೆ ಉಚ್ಚರಿಸುತಲಿ ತಾವ್ ವೇದೋಕ್ತ ಕರ್ಮಗಳ
ವಿದಿತರಾಗಿ ನಿರಂತರದಿ ತ
ತ್ಪದವ ನೈದಲು ಯಜ್ಞದಾನವು
ಸದಮಲ ಕ್ರಿಯ ತಪಗಳನೆ ಆಚರಿಸುತಿಹರೆಂದ ೨೪

ತದ ತನ್ನಭಿ ಸಂಧಾಯ ಫಲಂ ಯಜ್ಞ ತಪಃ ಕ್ರಿಯಾಃ
ದಾನ ಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ೨೫

ಸದ್ಭಾವೇ ಸಾಧುಭಾವೇಚ ಸದಿತ್ಯೇ ತತ್ಪ್ರಯುಜ್ಯತೇ
ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ೨೬

ಯಜ್ಞೇ ತಪಸಿ ದಾನೇಚ ಸ್ಥಿತಿಸ್ಸದಿತಿ ಚೋಚ್ಯತೇ
ಕರ್ಮಚೈವ ತದರ್ಥೀಯಂ ಸದಿತ್ಯೇ ವಾಭಿಧೀಯತೇ ೨೭

---

ಅಷ್ಟಪದೀಗದ್ಯ:—

ತತು ಎಂಬ ಶಬ್ದವಾಚ್ಯನು ಆದ ಹರಿಯನ್ನು
ಸತತ ಸ್ಮರಿಸುತ ಅನಿತ್ಯದ ಸ್ವರ್ಗ ಫಲಗಳನು
ಹಿತವೆಂದು ಬಯಸದಲೆ ಹರಿಸೇವೆಯೆಂದೆಂಬ
ಮತಿಯಿಂದ ತಿಳಿದು ನಿರುತ

ಅತಿ ವಿಮಲ ಯಜ್ಞ ತಪ ದಾನ ಸತ್ಕರ್ಮಗಳ
ವಿತ ಕ್ರಿಯೆಗಳೆಲ್ಲ ಮೋಕ್ಷವನೆ ಬಯಸುವರಿಂದ
ಸತತ ವಿರಚಿಸಿಕೊಂಬದೆಂಬ ಗೋಪ್ಯವು ಪಾಂಡು
ಸುತನೆ ಕೇಳೆಂದು ನುಡಿದ ೨೫

ಸತುಯೆಂಬ ಶಬ್ದ ಸದ್ಭಾವದಿ ಪ್ರಯೋಗಿಪುದು
ಸತುಯೆಂಬ ಶಬ್ದ ಸಾಧುತ್ವಕೊಪ್ಪುತಲಿಹುದು
ಸತುಯೆಂಬ ಶಬ್ದ ಹಾಂಗೇ ಸವಿಾಚೀನ ಸ
ತ್ಕರ್ಮಗಳಿಗೊಪ್ಪುತಿಹುದು

ಮತಿವಂತ ಕೇಳ್ಯಜ್ಞ ತಪಸು ದಾನಾದಿಗಳಿಗ್ಹಿತ
ಹರಿಯು ಫಲ ಕೊಡುವನೆಂಬ ಬುದ್ಧಿಯು ಮತ್ತು
ತತು ಪೂಜೆಯೆಂದರಿತು ಆಚರಿಪ ಕರ್ಮಗಳು
ಸತುಯೆನಿಪವನ್ನುಪಸತು ೨೬-೨೭

ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್
ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯನೋ ಇಹ ೨೮

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಶ್ರದ್ಧಾತ್ರಯವಿಭಾಗಯೋಗೋನಾಮ**
ಸಪ್ತದಶೋಽಧ್ಯಾಯಃ

---

ಷಟ್ಪದೀ ತ್ರಿಪುಟತಾಳ

ಪರಮನಲಿ ಸದ್ಭಕ್ತಿಯಿಲ್ಲದೆ
ನಿರುತ ಮಾಡುವ ಯಜ್ಞ ದಾನವು
ಪರಮ ತಪ ಶಾಸ್ತ್ರಾವ ಲೋಕನವೆಲ್ಲ ಅಸತೆಂದು
ಕರೆಸಿಕೊಳ್ಳುವು ಇದು ಜನಕೆ ಇಹ
ಪರಕೆ ಸಾಧನವಾಗದೆಂದಿಗು
ಸ್ಮರನ ಇಂದಿರೆಪತಿ ವಿಠಲನಲಿ ಶ್ರದ್ಧೆ ಮಾಡೆಂದಾ ೨೮

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ **"ಗೀತಾರಂಜನಾ"**ಖ್ಯ ಗ್ರಂಥೇ
**ಶ್ರದ್ಧಾತ್ರಯವಿಭಾಗಯೋಗೋನಾಮ**
ಸಪ್ತದಶೋಽಧ್ಯಾಯಃ



ಹರಿಃ ಓಂ

# ಹದಿನೆಂಟನೆಯ ಅಧ್ಯಾಯ

---

ಅರ್ಜುನ ಉವಾಚ:—

ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಂ
ತ್ಯಾಗಸ್ಯಚ ಹೃಷೀಕೇಶ ಪೃಥಕ್ಕೇಶಿನಿಷೂದನ ೧

ಶ್ರೀ ಭಗವಾನುವಾಚ:—

ಕಾಮ್ಯಾನಾಂ ಕರ್ಮಣಾಂನ್ಯಾಸಂ ಸಂನ್ಯಾಸಂ ಕವಯೋ ವಿದುಃ
ಸರ್ವ ಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ೨

---

ಪದ್ಯ:—

ಎಲೆ ಹೃಷೀಕಪ ಕೇಶಿನಾಮಕ
ಬಲಿದ ಅಸುರನ ಸೀಳಿದನೆ ಯುನು
ಕುಲತಿಲಕ ಬಿನ್ನೈಸುವೆನು ಸನ್ಯಾಸದಾ ವಿಧವ
ತಿಳಿಯೆನ್ನೆ ನಾ ತ್ಯಾಗಲಕ್ಷಣ
ಗಳನೆ ನಿಶ್ಚಯ ಬೇರೆ ಬೇರದಿ
ಯಲಿಕೆ ನಾನಿಚ್ಛೈಸುತಿಹೆ ಹೇಳೆಂದನಾ ಪಾರ್ಥ ೧

ಶ್ರೀ ಭಗವಾನುವಾಚ:—

ಕರ್ಮಗಳ ನಾ ಮಾಳ್ಪೆನೆಂಬುವ
ಹೆಮ್ಮನಳಿದನುದಿನದಿ ಬಹು ವಿಧ
ಕರ್ಮಗಳ ಫಲವೆನಗೆ ಬಹುದೆಂಬುವನೆ ಬಿಡುತಿಹುದು
ಕರ್ಮಸಮ್ಯಕ್ ತ್ಯಾಗವೆನುತಲಿ
ನಿರ್ಮಮರು ಅರಿತಿಹರು ಕಾಮಿಸಿ
ಕರ್ಮ ಮಾಡದೆ ಬಿಡುವುದಿದು ಸನ್ಯಾಸವೆಂಬುವರು ೨

ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ
ಯಜ್ಞದಾನ ತಪಃ ಕರ್ಮ ನತ್ಯಾಜ್ಯ ಮಿತಿ ಚಾಪರೇ ೩

ನಿಶ್ಚಯಂ ಶೃಣುಮೇ ತತ್ರ ತ್ಯಾಗೇ ಭರತ ಸತ್ತಮ
ತ್ಯಾಗೋಹಿ ಪುರುಷ ವ್ಯಾಘ್ರ ತ್ರಿವಿಧಸ್ಸಂಪ್ರಕೀರ್ತಿತಃ ೪

ಯಜ್ಞದಾನ ತಪಃ ಕರ್ಮನತ್ಯಾಜ್ಯಂ ಕಾರ್ಯಮೇವತತ್
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ ೫

---

ಪದ ಅಟತಾಳ

ಬಂಧಕತ್ವರೂಪಿ ದೋಷಯುಕ್ತವಾದ
ನಿಂದ್ಯ ಕಾಮನದ ಕರ್ಮಗಳ
ಸಂದೇಹಿಸದೆ ಬಿಟ್ಟು ಕಳೆಯುವುದಾವಶ್ಯ
ವೆಂದು ಪ್ರಾಜ್ಞರು ಹೇಳುತಿಹರೈ

ಖಂಡಷಟ್ಪದೀ

ಮನನಶೀಲರು ಹೇಳುವರು ಕೆಲ
ಮುನಿಗಳ್ಯಜ್ಞವು ದಾನ ಧರ್ಮಗ
ಳನುದಿನದಿ ತಪತ್ಯಾಜ್ಯವಲ್ಲೆಂದಿನಿತು ಹೇಳುವರೊ ೩

ಭರತ ಕುಲದೊಳಗುತ್ತಮನೆ ಈ
ಪರಿಯ ಕರ್ಮತ್ಯಾಗ ವಿಷಯವು
ಧರೆಯೊಳಗೆ ಮೂರು ಪ್ರಕಾರದಿ ಸಂಪ್ರಕೀರ್ತಿತವೊ
ನರನೆ ತಸ್ಮಾತ್ಕಾರಣದಿ ಈ
ಸರ್ವ ಕರ್ಮ ತ್ಯಾಗ ವಿದ ನಿ
ರ್ಧರಿಸಿದನು ನಿಶ್ಚಯವ ಎನ್ನಿಂದೀಗ ಕೇಳೆಂದ ೪

ವರ ಸುಯಜ್ಞವು ದಾನ ತಪಗಳು
ಪರಮ ಸತ್ಕರ್ಮಗಳು ಮೋಹದಿ
ಪರಿಹರಿಸಿ ಬಿಡಲಾಗದದು ಆಚರಿಸಲೇ ಬೇಕು

ಏತಾನ್ಯಪಿತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿಚ
ಕರ್ತವ್ಯಾ ನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ ೬
ನಿಯತಸ್ಯತು ಸಂನ್ಯಾಸಃ ಕರ್ಮಣೋನೋಪ ಪದ್ಯತೇ
ಮೋಹಾತ್ತಸ್ಯ ಪರಿತ್ಯಾಗ ಸ್ತಾಮಸಃ ಪರಿಕೀರ್ತಿತಃ ೭
ದುಃಖ ಮಿತ್ಯೇವ ಯತ್ಕರ್ಮ ಕಾಯಕ್ಲೇಶ ಭಯಾತ್ತ್ಯಜೇತ್
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗ ಫಲಂ ಲಭೇತ್ ೮

---

ಧರೆಯೊಳ್ಯಜ್ಞವು ದಾನ ತಪಗಳು
ಪರಮ ಪಾವನ ಮಾಳ್ಪುದೈ ನರ
ವರರಿಗಿದು ಜ್ಞಾನಪ್ರದವೊ ಮೋಕ್ಷಪ್ರದಾಯಕವೋ ೫

ಇನಿತು ಸತ್ಕರ್ಮಂಗಳಾದರು
ಅನುದಿನದಿ ಹರಿ ಮಾಡಿಸುವನೆಂ
ದೆನುತ ತಿಳಿಯುವ ಜೀವ ಕರ್ತೃತ್ವವನೆ ಬಿಡದಂಥಾ
ಘನ ಕುಮೋಹದ ಸಂಗಫಲ ಬಿ
ಟ್ಟನುದಿನದಿ ಕರ್ಮಗಳ ಕರ್ತವ್ಯವು ಎನು
ತ ನಿಶ್ಚೈಸಿದುತ್ತಮವೆನ್ನ ಮತವೆಂಪ ೬

ನಿತ್ಯ ನಿಯಮಿತ ಕರ್ಮ ಬಿಡುವುದು
ಯುಕ್ತವಲ್ಲವೊ ಮೋಹದಿಂದಲಿ
ಮತ್ತೆ ಕರ್ಮವ ತ್ಯಜಿಸುವುದು ತಾಮಸವೆನಿಸುತಿಹುದು
ಮತ್ತೆ ಅವನು ಕರ್ಮದುಃಖೋ
ತ್ಪತ್ತಿ ಆಚರಿಸುವೊಡೆಯೆಂದೆನು
ತುತ್ತಮನ ಸತ್ಕರ್ಮ ಕಾಯಕ್ಲೇಶ ಭಯದಿಂದ

ಪರಿಹರಿಸಿ ಬಿಡಲದಕೆ ರಾಜಸ
ನರನು ಮಾಡುವ - ತ್ಯಾಗವೆನುತಲಿ
ಅರಿತವರು ಹೇಳುವರು ಈ ಪರಿ ತ್ಯಾಗ ಮಾಡುತಿರೆ

ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗ ಸ್ಸಾತ್ತ್ವಿಕೋ ಮತಃ ೯

ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ
ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನ ಸಂಶಯಃ ೧೦

---

ನರನು ಕರ್ಮತ್ಯಾಗ ಫಲವೆಂ
ಬುರುತರದ ಸಿದ್ಧಿಯನೆ ಪಡೆಯುನ:
ಭರತ ಕುಲದೊಳಗುತ್ತಮನೆ ತಿಳಿಯೆಂದನಾ ಹರಿಯು ೭-೮

ಮತ್ತೆ ಯತ್ಕರ್ಮಗಳು ನಿಯತವೊ
ನಿತ್ಯ ಕರ್ತವ್ಯಗಳಿವೆನ್ನುತ
ಚಿತ್ತದಲಿ ನಿಶ್ಚೈಸಿ ತತ್ಫಲ ಸಂಗವನೆ ಬಿಟ್ಟು,
ನಿತ್ಯ ಕರ್ಮವ ಮಾಳ್ಪನೋ ಆ
ಉತ್ತಮದ ತ್ಯಾಗಕ್ಕೆ ಸುಜನರು
ಮತ್ತೆ ಸಾತ್ವಿಕ ತ್ಯಾಗವೆಂಬರದೆನ್ನ ಮತವೆಂದ ೯

ಅಷ್ಟಪದೀಗದ್ಯಾ:—

ಪರಮಾತ್ಮ ಪಾಪಪುಣ್ಯದ ಕರ್ಮವೆನ್ನಿಂದ
ನಿರುತ ಮಾಡಿಸುವ ಮಾಡುವೆನಲ್ಲದಲೆ ನಾನು
ಪರಿಪರಿಯ ಕರ್ಮ ಮಾಡಲು ಸ್ವತಂತ್ರನು ಅಲ್ಲ
ಪರಿಪರಿಯ ತತ್ಫಲಗಳು

ಬರುವುದಿಲ್ಲೆನಗೆ ಅಜ್ಞಾನಿಗಳಿಗುಂಟೆಂದು
ಅರಿತು ಅಸುಖದ ಅಸತ್ಕರ್ಮದಲಿ ದ್ವೇಷಿಸನು
ನಿರುತ ಕುಶಲದ ನಿತ್ಯ ಕರ್ಮದಲಿ ಸಿಗನು ಈ
ಪರಿ ವಿವೇಕದಿ ಯುಕ್ತನು ೧೦

ನಹಿ ದೇಹ ಭೃತಾಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ
ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ೧೧

ಅನಿಷ್ಟಮಿಷ್ಟಂ ಮಿಶ್ರಂಚ ತ್ರಿವಿಧಂ ಕರ್ಮಣಃ ಫಲಂ
ಭವತ್ಯ ತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ೧೨

ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧಮೇ
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವ ಕರ್ಮಣಾಂ ೧೩

---

ಧರೆಯೊಳಗೆ ಮೇಧಾವಿ ಛಿನ್ನ ಸಂಶಯವುಳ್ಳ
ನರನು ಮಾಡುವ ಸರ್ವ ಕರ್ಮಗಳ ತ್ಯಾಗನೀ
ಪರಿ ತಿಳಿಯೊ ಅದು ನಿಮಿತ್ತದೆ ಸೂಕ್ಷ್ಮ ಸತ್ವಗುಣ
ಭರಿತನಾ ತ್ಯಾಗವಿಂತೋ

ನರಲೋಕದಲಿ ದೇಹ ಧರಿಸಿದವರ್ಯಾರಿಂದು
ನರನೆ ಕೇಳ್ಕೈ ಅಶೇಷದಿ ಕರ್ಮಗಳನೆಲ್ಲ
ಪರಿಹರಿಸಲೋಸುಗ ಅಸಾಧ್ಯ ಲೋಕದೊಳಾವ
ನರರಿಂದ ಈ ವಿಧವನೆ ೧೧

ಅರಿತು ತತ್ಕರ್ಮಫಲ ಬಿಡುತಿರಲು ಅವನು ಸ
ತ್ಪುರುಷರಿಂದಲಿ ತ್ಯಾಗಿಯೆನಿಸುವನು ಕರ್ಮಫಲ
ನರನೆ ಕೇಳ್ಕೈ ತ್ರಿವಿಧ ಮಿಶ್ರ ಇಷ್ಟಾನಿಷ್ಟ
ಪರಿಯಿನಿತು ಅತ್ಯಾಗಿಗೇ

ಮರಣದಾ ನಂತರದಿ ಭೋಗ್ಯವಾಹದು ಕೇಳು
ಭರತ ಕುಲತಿಲಕ ಪಾರ್ಥನೆ ತ್ಯಾಗಿಯಾದಂಥ
ಪರಮ ಸನ್ಯಾಸಿಗಳಿಗಿವು ಭೋಗ್ಯವಾಹದೈ
ಹರಿ ಕೊಡುವ ನಿತ್ಯ ಸುಖವ ೧೨

ಅಧಿಷ್ಠಾನಂ ತಥಾಕರ್ತಾ ಕರಣಂಚ ಪೃಥಗ್ವಿಧಂ
ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ ೧೪

ಶರೀರ ವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ೧೫

ತತ್ರೈವಂಸತಿ ಕರ್ತಾರ ಮಾತ್ಮಾನಂ ಕೇವಲಂತು ಯಃ
ಪಶ್ಯತ್ಯಕೃತ ಬುದ್ಧಿತ್ವಾತ್ ನಸಪಶ್ಯತಿ ದುರ್ಮತಿಃ ೧೬

---

ಎಲೆ ನರನೆ ಜ್ಞಾನಿಗಳ ಸಿದ್ಧಾಂತ ನಿರ್ಣಯವು
ಹಲವು (ಎಲ್ಲ) ಕರ್ಮದ ಸಿದ್ಧಿಗೋಸ್ಕರ್ಹೇಳಿಪ್ಪುದನೆ
ತಿಳಿಯೊ ಈ ಐದು ಕಾರಣವೆಂದು ಎನ್ನಿಂದ
ಚಲಿಸದಲೆ ಕೇಳು ಇದನೆ

ತಿಳಿ ಅಧಿಷ್ಠಾನವೆಂದರೆ ದೇಹ, ಕರ್ತನೆನೆ
ಮಲರಹಿತ ಪರಮಾತ್ಮ ಪೃಥಕೆಂದ್ರಿಯಗಳಿನ್ನು
ಹಲವು ಬರೆ ಬರೆ ಬೇರೆ ಚೇಷ್ಟೆ ತಾತ್ವಿಕ ಸುರ
ಹರ್ಲವರೀವಿಧ ಪಂಚಕ (೧೩-೧೪)

ನರನು ಕಾಯದಿ ವಚನ ಮನದಿಂದ ಆವಾವ
ಪರಿಯ ಕರ್ಮಗಳಿಗಾರಂಭಿಸುತಲಿಹನೊ ಅದು
ನರನೆ ಕೇಳ್ಸತ್ಕರ್ಮವೋ ಅಸತ್ಕರ್ಮವೋ
ಪರಿಪರಿಯ ಕರ್ಮಗಳಿಗೆ

ಪರಮ ಕಾರಣವೊ ಪೂರ್ವೋಕ್ತ ಪಂಚಕವದರೊ
ಳಿರುವ ಪರಮಾತ್ಮನೇ ಮುಖ್ಯ ಕಾರಣನೆಂದು
ಅರಿವನಾವನೊ ಅವನು ಬುದ್ಧಿ ದೆಸೆಯಿಂದಿವನೆ
ಹರಿ ಮಾಳ್ಪುದಿಲ್ಲವೆಂದು ೧೫

ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನಲಿಪ್ಯತೇ
ಹತ್ವಾಽಪಿ ಸ ಇಮಾನ್ ಲೋಕಾನ್ ನ ಹಂತಿ ನ ನಿಬಧ್ಯತೇ ೧೭

ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ
ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮ ಸಂಗ್ರಹಃ ೧೮

ಜ್ಞಾನಂ ಕರ್ಮಚ ಕರ್ತಾಚ ತ್ರಿಧೈವ ಗುಣಭೇದತಃ
ಪ್ರೋಚ್ಯತೇ ಗುಣ ಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ೧೯

---

ಅರಿಯನೆಂದೆಂದು ದುರ್ಮತಿ ಮನುಜನೀ ವಿಧವ
ಅರಿಯದೇ ಹರಿಯ ಸ್ವಾತಂತ್ರ್ಯ ಗುಣವನ್ನೆ ಅಪ
ಹರಿಸಿ ಪರಮಾತ್ಮ ಮಾಡಿಸನು ನಾನೇ ಮಾಳ್ಪೆ
ಪರಿಪರಿಯ ಕರ್ಮವೆಂದು

ಮರುಳರೀವಿಧದಿ ನಿಶ್ಚೈಸುವರು ಕೇಳಾವ
ನರಗೆ ನಾ ಮಾಡಿದೆನು ಕರ್ಮವೆಂಬುವ ಭಾವ
ನಿರದೊ ಮತ್ತಾವ ನರಗದರ ಫಲದಲಿ ಬುದ್ಧಿ
ನಿರುತ ಲೇಪಿಸದೊ ಅವನು ೧೬

ನರನೆ ಕೇಳೀ ಲೋಕರೆಲ್ಲರನು ಕೊಂದರಾ
ನರನು ಕೊಂದವನಲ್ಲ ಅದರ ಫಲ ದುಃಖದಲಿ
ನಿರುತ ಬಂಧಿತನಾಗನ್ನೈ ಪಾರ್ಥ ಕೇಳಿನ್ನು
ಹರಿಯು ಜ್ಞಾನಜ್ಞೇಯದಿ

ಮರಳಿ ಜ್ಞಾತೃವಿನಲ್ಲಿ ತನ್ನಾಮದಿಂದಿದ್ದು
ಎರಡೊಂದು ವಿಧದ ಕರ್ಮಗಳ ಪ್ರೇರಿಸುತಿಹನು
ಕರಣಗಳು ಕರ್ಮತದ ಮುಖ್ಯ ಕರ್ತನು ಜೀವ
ಎರಡೊಂದು ಈ ವಿಧದಲಿ (೧೭-೧೮)

ಸರ್ವ ಭೂತೇಷು ಯೇನೈಕಂ ಭಾವಮವ್ಯಯ ಮೀಕ್ಷತೇ
ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಂ ೨೦

ಪೃಥಕ್ತ್ವೇನತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್
ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಂ ೨೧

---

ಪರಿಪರಿಯ ಕರ್ಮಕಿದು ಕಾರಣವೊ ಪಾಂಡವನೆ
ಮರಳಿ ಜ್ಞಾನವು ಕರ್ಮ ಮತ್ತೆ ಕರ್ತನು ಜೀವ
ಎರಡೊಂದು ವಿಧದಿ ಗುಣ ಭೇದದಿಂದಿಪ್ಪದಿದು
ಪರಮ ಸಾಂಖ್ಯರ ಶಾಸ್ತ್ರದೀ

ಒರೆದಿಹುದು ಆದರ ಭೇದವ ಯಥಾವತು ನಿನಗೆ
ಒರೆವೆನಾ ಕೇಳು, ಅವಿಭಕ್ತ ಪರಮವ್ಯಯನು
ಪರಿಪರಿ ವಿಭಕ್ತ ಪ್ರಾಣಿಗಳೊಳಗೆ ಒಬ್ಬನಿಹ
ಹರಿಯೆಂಬ ಭಾವದಿಂದ ೧೯

ಇನಿತು ತಿಳಿಯುವ ಜ್ಞಾನವಾವುದೋ ಅದು ಕೇಳು
ಘನ ಸಾತ್ವಿಕ ಜ್ಞಾನ ಸರ್ವ ಪ್ರಾಣಿಗಳ ಹೃ
ದ್ವನಜದೊಳಗಿಪ್ಪ ಹರಿ ಒಬ್ಬನೆಂದರಿಯದೆ,
ಘನಕುಚಿತ ಬುದ್ಧಿಯಿಂದ

ಇನಿತು ಲೋಕಸ್ಥ ಪ್ರಾಣಿಗಳು ಭಿನ್ನರು, ತಾವು
ಘನ ತಾರತಮ್ಯ ಯುಕ್ತರು ಎಂಬುದಷ್ಟರಿತು
ವನಜಾಕ್ಷ ಹರಿಯಂತರ್ಯಾಮಿ ಯೆಂಬುದನರಿಯ
ದಿಹುದೆ ರಾಜಸಜ್ಞಾನವು ೨೦

ನರನೆ ಕೇಳಿನ್ನು ತಾಮಸರ ಜ್ಞಾನವನೊರೆವೆ
ಪರಮಾತ್ಮನೊಬ್ಬನೇ ಸರ್ವವೆಂಬುವುದು ಜೀ
ವರಲಿ ಹರಿ ಪೂರ್ಣನಲ್ಲೆಂಬ ಜ್ಞಾನವು ಕೇಳು
ಮರಳಿ ಹೇಳುವೆನು ನಿನಗೆ

ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇಸಕ್ತ ಮಹೈತುಕಂ
ಅತತ್ತ್ವಾರ್ಥವದಲ್ಪಂಚ ತತ್ತಾಮಸ ಮುದಾಹೃತಂ ೨೨

ನಿಯತಂ ಸಂಗರಹಿತ ಮರಾಗ ದ್ವೇಷತಃ ಕೃತಂ
ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕ ಮುಚ್ಯತೇ ೨೩

ಯತ್ತುಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾಪುನಃ
ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಂ ೨೪

ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯಚ ಪೌರುಷಂ
ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸ ಮುಚ್ಯತೇ ೨೫

---

ಪರಮಾತ್ಮನೇ ಜೀವನೆಂಬ ಜ್ಞಾನವು ಹೀಗೆ
ಪರಿಪರಿಯ ತತ್ತ್ವಾರ್ಥವಲ್ಲದ ಅಹೈತುಕದ
ಪರಮ ಅಲ್ಪಜ್ಞಾನವ್ಯಾವುದೋ ಅದು ತಾಮ
ಸರ ಜ್ಞಾನವೆಂದು ತಿಳಿಯೊ ೨೨

ಪದ ಆದಿತಾಳ

ನಿರುತ ಫಲದ ಸಂಗವಳಿದು ರಾಗದ್ವೇಷ
ಜರಿದು ತತ್ಫಲವಪೇಕ್ಷಿಸದೆ
ನರರಿಂದ ಕೃತ ನಿತ್ಯ ಕರ್ಮವ್ಯಾವುವೊ ಅದು
ಪರಮ ಸಾತ್ವಿಕವೆನಿಸುವುದೊ ೨೩

ಫಲವಪೇಕ್ಷಿತನಿಂದು ಹಮ್ಮುಳ್ಳ ನರನಿಂದು
ಹಲವಾಯಾಸಗಳಿಂದು ಮಾಳ್ಪ
ಹಲವು ಕರ್ಮಗಳಾವುದದಕೆ ರಾಜಸವೆಂದು
ತಿಳಿದವರಿಂದೆನಿಸುವುದೊ ೨೪

ಮುಕ್ತ ಸಂಗೋಽನಹಂವಾದೀ ಧೃತ್ಯುತ್ಸಾಹ ಸಮನ್ವಿತಃ
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ವಿಕ ಉಚ್ಯತೇ ೨೬

ರಾಗೀಕರ್ಮ ಫಲ ಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ
ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ೨೭

ಅಯುಕ್ತಃ ಪ್ರಾಕೃತಸ್ಸ್ತಬ್ಧಃ ಶಠೋ ನೈಕೃತಿಕೋಽಲಸಃ
ವಿಷಾದೀ ದೀರ್ಘಸೂತ್ರೀಚ ಕರ್ತಾ ತಾಮಸ ಉಚ್ಯತೇ ೨೮

---

ಅನುಬಂಧ ಕ್ಷಯ ಹಿಂಸೆಯು ಪೌರುಷವು ನೋಡ
ದನುದಿನ ಯತ್ಕರ್ಮಗಳಿಗೆ
ಮನುಜನಾರಂಭಿಸುವನೊ ಮೋಹದಿಂದದು
ಅನಘ ತಾಮಸವೆನಿಸುವುದೊ ೨೫

ಕರ್ಮಫಲದ ಸಂಗವಳಿದು ಉತ್ಸಾಹದಿ
ನಿರ್ಮಮ ಧೈರ್ಯ ಸಂಯುತನು
ಹಮ್ಮನಳಿದು ಸಿದ್ಧ್ಯ ಸಿದ್ಧಿಯೊಳ್ಸಮನಾಗಿ
ಕರ್ಮ ಮಾಡಿದವ ಸಾತ್ವಿಕನೊ ೨೬

ಚಲಿಸುವ ವಿಷಯಾನುರಾಗವುಳ್ಳವನಾಗಿ
ಫಲವಪೇಕ್ಷಿಸುವ ನಿತ್ಯದಲಿ
ಫಲ ಬಿಡಲಾರದಲುಬ್ಧ ಸ್ವದೇಹಕೆ
ಬಲು ಹಿಂಸೆ ಕೊಡುವ ನಿತ್ಯದಲಿ

ಮನಶುದ್ಧಿ ರಹಿತ ಫಲಿಸಲು ಸಂತೋಷಿಪ
ಮನದಿ ದುಃಖಿಪ ಫಲಿಸದಿರೆ
ಇನಿತಿರ್ಪ ಕರ್ತ ರಾಜಸನೆನಿಸುವನೊ ಹೇ
ಅನಘ ಕೇಳಯ್ಯ ನೀ ನಿದನೆ ೨೭

ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು
ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ೨೯

ಪ್ರವೃತ್ತಿಂಚ ನಿವೃತ್ತಿಂಚ ಕಾರ್ಯಾಕಾರ್ಯೇ ಭಯಾಭಯೇ
ಬಂಧಂಮೋಕ್ಷಂಚ ಯಾವೇತ್ತಿ ಬುದ್ಧಿ ಸ್ಸಾ ಪಾರ್ಥ ಸಾತ್ತ್ವಿಕೀ ೩೦

---

ಅಲಸ ಅಯುಕ್ತ ಪ್ರಾಕೃತ ಶಠಸ್ತಬ್ಧನು
ಬಲಿದ ವಿಷಾದಿ ನೈಷ್ಕೃತಿಕಾ
ಹಲವು ಕರ್ಮದಲಿ ಜಾಗ್ರತೆ ಹೀನ ಕರ್ತನು
ತಿಳಿಯೊ ತಾಮಸನೆನಿಸುವನು ೨೮

ಗುಣಭೇದದಿಂದ ತೋರುವ ಬುದ್ಧಿ ಧೃತಿಗಳ
ಅನಘನೆ ತ್ರಿವಿಧ ಭೇದವನು
ನಿನಗಶೇಷದಿ ಬೇರೆ ಬೇರೆ ನಾ ಹೇಳುವು
ದನೆ ಕೇಳೆಂದನು ರಮಾಧವನು ೨೯

ವರಸು ಪ್ರವೃತ್ತಿ ನಿವೃತ್ತಿಯ ಮಾರ್ಗವು
ನಿರುತ ಕಾರ್ಯಾಕಾರ್ಯಗಳನು
ಪರಮ ಭಯಾಭಯ ಮಾರ್ಗ ಬಂಧದಮಾರ್ಗ
ಮರಳಿ ಮೋಕ್ಷದ ಮಾರ್ಗಗಳನು

ಅರಿಯುವುದ್ಯಾವುದೊ ಅದು ಸಾತ್ವಿಕ ಬುದ್ಧಿ
ನರನೆ ಕೇಳಾವ ಬುದ್ಧಿಯಲಿ
ಪರಮ ಧರ್ಮಾಧರ್ಮ ಕಾರ್ಯಾಕಾರ್ಯಗಳನೆ
ವರೆದೊರೆದ್ದೋಳಿದರದನೆ

ಅರಿಯ ನಿಶ್ಚಯವಲ್ಲವೆಂದು ಸಂದೇಹದಿ
ಇರುವ ಆ ಬುದ್ಧಿ ರಾಜಸವೊ
ನರನಾವ ಬುದ್ಧಿ ಅಜ್ಞಾನದಿಂ ಮುಸುಕಿರು
ತಿರಲಾವ ಧರ್ಮ ಕಾರ್ಯದಲಿ

ಯಯಾಧರ್ಮ ಮಧರ್ಮಂಚ ಕಾರ್ಯಂಚಾಕಾರ್ಯಮೇವಚ
ಅಯಥಾವತ್ಪ್ರಜಾನಾತಿ ಬುದ್ಧಿ ಸ್ಸಾ ಪಾರ್ಥ ರಾಜಸೀ ೩೧

ಅಧರ್ಮಂ ಧರ್ಮ ಮಿತಿಯಾ ಮನ್ಯತೇ ತಮಸಾಽವೃತಾ
ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿ ಸ್ಸಾ ಪಾರ್ಥ ತಾಮಸೀ ೩೨

ಧೃತ್ಯಾಯಯಾಧಾರಯತೇ ಮನಃ ಪ್ರಾಣೇಂದ್ರಿಯ ಕ್ರಿಯಾಃ
ಯೋಗೇ ನಾವ್ಯಭಿಚಾರಿಣ್ಯಾ ಧೃತಿಸ್ಸಾ ಪಾರ್ಥ ಸಾತ್ತ್ವಿಕೀ ೩೩

---

ಅರಿಸ ಅಧರ್ಮವೆಂದೆನುತ ಹೀಗೆ ಬಹು
ಪರಿಯ ಕರ್ತವ್ಯಾರ್ಥಗಳಲಿ
ಅರಿಯುವ ವಿಪರೀತವಾಗಿ ಆ ಬುದ್ಧಿಯು
ನರನೆ ಕೇಳಯ್ಯ ತಾಮಸವೊ ೩೦-೩೨

ಎಲೆ ಪಾರ್ಥ ಕೇಳಾವ ಧೈರ್ಯದಿ ಮನವನು
ಚಲಿಸದಂದದಿ ವಿಷಯದಲಿ
ಹಲವು ಪ್ರಾಣೇಂದ್ರಿಯ ಕ್ರಿಯೆಗಳ ನಿಯಮಿಸಿ
ಸುಲಲಿತ ಭಕ್ತಿಯೋಗದಲಿ

ಸ್ಥಿರದಿ ನಿಲಿಸುವ ಧೃತಿ ಸಾತ್ವಿಕವೈ ಕೇಳು
ನರನೆ ಮತ್ತಾವ ಧೈರ್ಯದಲಿ
ಧರಿಸಿ ಧರ್ಮಾರ್ಥ ಕಾಮದ ಇಚ್ಛಾಕರ್ಮದಿ
ಭರದಿಂದ ಸಿಲುಕಿ ತತ್ಫಲವ

ಇಚ್ಛಿಪ ಧೃತಿಗೆ ರಾಜಸವೆಂದು ನಾಮವೊ
ಕುತ್ಸಿತದ್ಯಾವ ಧೈರ್ಯದಲಿ
ಮತ್ಸರ ಮದವು ಸ್ವಪ್ನವು ಶೋಕ ಭಯಗಳು
ಉಚ್ಚ ವಿಷಾದಾದಿಗಳನೆ

ಯ ಯಾತು ಧರ್ಮ ಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ
ಪ್ರಸಂಗೇನ ಫಲಾಕಾಂಕ್ಷೀ ಧೃತಿಸ್ಸಾ ಪಾರ್ಥ ರಾಜಸೀ ೩೪

ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವಚ
ನ ವಿ ಮುಂಚಂತಿ ದುರ್ಮೇಧಾ ಧೃತಿಸ್ಸಾ ಪಾರ್ಥ ತಾಮಸೀ ೩೫

ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇಽಭರತರ್ಷಭ
ಅಭ್ಯಾಸಾದ್ರಮತೇ ಯತ್ರ ದುಃಖಾಂತಂಚ ನಿಗಚ್ಛತಿ ೩೬

---

ಬಿಡದ ದುರ್ಬುದ್ಧಿಯು ಧೃತಿಗೆ ತಾಮಸವೆಂದು
ಪೊಡವಿಯೊಳಗೆ ಹೇಳುತಿಹರೂ
ನುಡಿದನಿಂಗೆಂದಿಂದಿರೇಶ ವಠಲರಾಯ
ಪೊಡವೀಶ ಕೇಳಯ್ಯ ಇದನೆ ೩೩-೩೬

ಷಟ್ಪದೀ ತ್ರಿಪುಟತಾಳ

ಆವ ಸುಖದಭ್ಯಾಸ ದುಃಖವ
ನೀವುದೋ ಕಡೆಗಿನ್ನು ಕೇಳಿ
ನ್ನಾವ ಸುಖದಭ್ಯಾಸ ಕಡೆಗದು ಸುಖವ ಕೊಡುತಿಹುದೊ
ಆ ವಿಧಕೆ ಮಧ್ಯಸ್ಥ ತ್ರಿವಿಧದ
ಸೇವಿಸುವ ಸುಖದಿರವ ಈಗಲೆ
ನಾ ಒಲಿದು ಹೇಳುವೆನು ಕೇಳೆಂದನು ರಮಾಧವನು ೧

ಮೊದಲು ಯತ್ಸುಖಗರಳದಂತಿ
ಹುದದೆ ಕಡೆಗೆ ಅಮೃತೋಪಮೆನಿಸುವು
ದದರ ದೆಸೆಯಿಂದಾತ್ಮ ಬುದ್ಧಿ ಪ್ರಸಾದ ಹುಟ್ಟುವುದೊ
ಅದಕೆ ಸಾತ್ವಿಕ ಸೌಖ್ಯವೆಂಬರು
ವಿಧವಿಧದ ದುರ್ವಿಷಯದೊಳಗಿಂದ್ರಿ
ಯದ ಸಂಯೋಗಾದಿಯಲಿ ಅಮೃತೋಪಮೆನಿಸುವದೊ ೨

ಯತ್ತ ದಗ್ರೇ ವಿಷಮಿವ ಪರಿಣಾಮೇಽಮೃತೋಪಮಂ
ತತ್ಸುಖಂ ಸಾತ್ವಿಕಂ ಪ್ರೋಕ್ತ ಮಾತ್ಮಬುದ್ಧಿ ಪ್ರಸಾದಜಂ ೩೭

ವಿಷಯೇಂದ್ರಿಯ ಸಂಯೋಗಾತ್ ಯತ್ತ ದಗ್ರೇಽಮೃತೋಪಮಂ
ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಂ ೩೮

ಯದಗ್ರೇ ಚಾನುಬಂಧೇ ಚ ಸುಖಂ ಮೋಹನ ಮಾತ್ಮನಃ
ನಿದ್ರಾಽಽಲಸ್ಯ ಪ್ರಮಾದೋತ್ಥಂ ತತ್ತಾಮಸಮುದಾಹೃತಂ ೩೯

ನತ ದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ
ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಸ್ಸ್ಯಾತ್ ತ್ರಿಭಿರ್ಗುಣೈಃ ೪೦

ಬ್ರಾಹ್ಮಣ ಕ್ಷತ್ರಿಯ ವಿಶಾಂ ಶೂದ್ರಾಣಾಂ ಚ ಪರಂತಪ
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈ ೪೧

---

ಅದು ಕಡೆಗೆ ವಿಷದಂತೆ ಕೆಡಿಸುವು
ದದಕೆ ರಾಜಸ ಸೌಖ್ಯವೆಂಬರು
ಮೊದಲು ಕಡೆಯಲಿ ಮನವ ಮೋಹದಿ ಮುಸುಕಿ ಕೆಡಿಸುತಿಹ
ಮದದಿ ನಿದ್ರಾಲಸ್ಯದಿಂದಲಿ
ಉದಿತ ಯತ್ಸುಖ ಲಭ್ಯವಾಗುವು
ದದಕೆ ತಾಮಸ ಸೌಖ್ಯವೆಂದ್ಹೇಳುವರು ಕೇಳೆಂದ ೩೮-೩೯

ಭೂಮಿಯಲಿ ಪಶುಪಕ್ಷಿ ಮನುಜ
ಸ್ತೋಮದಲಿ ಸ್ವರ್ಗಸ್ಥ ಅಮರ
ಸ್ತೋಮದಲಿ ಯಜ್ಜೀವ ಸಂಘರು ಇಹರೊ ಅವರೆಲ್ಲ
ಈ ಮಹಾ ಚಿತ್ಪ್ರಕೃತಿ ಸಂಭವ
ತಾಮಸಾಂತ ಗುಣತ್ರಯಂಗಳ
ಸೀಮೆಯಿಂದಲಿ ಮುಕ್ತರಾದವರಿಲ್ಲ ಕೇಳೆಂದ ೪೦

ಶಮೋದಮಸ್ತಪಶ್ಶೌಚಂ ಕ್ಷಾಂತಿರಾರ್ಜವ ಮೇವಚ
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಾಹ್ಮಂ ಕರ್ಮ ಸ್ವಭಾವಜಂ ೪೨

ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇಚಾಪ್ಯಪಲಾಯನಂ
ದಾನಮೀಶ್ವರ ಭಾವಶ್ಚ ಕ್ಷಾತ್ರಂ ಕರ್ಮಸ್ವಭಾವಜಂ ೪೩

---

ಹಲವು ಪ್ರಾಣಿಗಳೊಳಗೆ ಯೋಗ್ಯತೆ
ನೆಲೆಸಿಹುದು ಸಂಸಾರದಲಿ ನಿ
ರ್ಮಲ ಸುಮೋಕ್ಷದಿ ಬ್ರಹ್ಮ ಕ್ಷತ್ರಿಯ ವೈಶ್ಯರೆಂತೆಂದು
ತಿಳಿಯೊ ಪಾದಜರೆಂದು ಯೋಗ್ಯತೆ
ಯಲಿ ಯುತರು ಜನಿಸಿರಲು ಅವರವ
ರಲಿ ಯೋಗ್ಯತೆಯ ನನುಸರಿಸಿ ಗುಣಕರ್ಮಗಳು ಬೇರಹುವು ೪೧

ಶಮದಮಂಗಳು ತಪವು ಶೌಚವು
ಸಮನಿಸಿದ ಸ್ಥಿರಣೆಯು ಋಜುತನ
ವಮಲತತ್ವಜ್ಞಾನ ವಿಜ್ಞಾನಂಗಳಿನಿತಿನ್ನೂ
ವಿಮಲ ಆಸ್ತಿಕ್ಯಾದಿ ಗುಣಗಳು
ಕ್ಷಮೆಯು ಸುರರಿಗೆ ಧರಣಿಯಲಿ
ನೇಮಿತ ಸ್ವಭಾವಜ ಕರ್ಮಗಳು ಕೇಳೆಂದ ಮಾಧವನು ೪೨

ಧೃತಿಯು ದಕ್ಷತೆ ಶೌರ್ಯ ತೇಜವು
ಅತಿ ಭಯದಿ ಯುದ್ಧದಲಿ ಓಡದ
ಸ್ಥಿತಿಯು ಪಾತ್ರರಿಗನುದಿನದಿ ದಾನವನೆ ಕೊಡುತಿಹುದು
ಸ್ಮೃತಿ ವಿಹಿತ ದಂಡನೆಯು ದುರುಳರ
ಸತತ ನಿಗ್ರಹ ಮಾಳ್ಪ ಕರ್ಮವು
ಮತಿವಂತ ಕೇಳ್ ಕ್ಷತ್ರಿಯ ಸ್ವ-ಭಾವಜ ಕರ್ಮಗಳಿವೆಂದ ೪೩

ಕೃಷಿ ಗೋರಕ್ಷ ವಾಣಿಜ್ಯಂ ವೈಶ್ಯಂ ಕರ್ಮಸ್ವಭಾವಜಂ
ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ ೪೪

ಸ್ವೇಸ್ವೇ ಕರ್ಮಣ್ಯಭಿರತಸ್ಸಂಸಿದ್ಧಿಂ ಲಭತೇ ನರಃ
ಸ್ವಕರ್ಮ ನಿರತಸ್ಸಿದ್ಧಿಂ ಯಥಾ ವಿಂದಂತಿ ತಚ್ಛೃಣು ೪೫

ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂವಿಂದತಿ ಮಾನವಃ ೪೬

---

ಎಲೆ ನರನೆ ಕೃಷಿ ಮಾಡುವುದು ಗೋ
ಗಳನೆ ರಕ್ಷಿಸುತಿಹುದು ನಿತ್ಯದಿ
ಹಲವು ಪರಿ ವಾಣಿಜ್ಯ ವೈಶ್ಯ ಸ್ವಭಾವಜರ ಕರ್ಮ
ತಿಳಿಯೊ ಈ ತ್ರಿವಿಧರನೆ ಸೇವಿಸು
ತಲಿ ಅವರ ಪರಿಚರ್ಯ ಮಾಳ್ಪುದು
ಇಳೆಯೊಳಗೆ ಶೂದ್ರ ಸ್ವಭಾವಜ ಕರ್ಮ ಕೇಳೆಂದ ೪೪

ತಮ್ಮ ತಮ್ಮ ಸ್ವಕರ್ಮದಲಿ ರತಿ
ಇವ್ವಹಿಯೊಳುಳ್ಳವಗೆ ಸಿದ್ಧಿಯು
ನಿರ್ಮಲದ ಮೋಕ್ಷವದು ಲಭಿಸುವುದಿದು ನಿಮಿತ್ತದಲಿ
ತಮ್ಮ ತಮ್ಮ ಸ್ವಕರ್ಮ ನಿರತರು
ಈ ಮಹೀ ಮಂಡಲದಿ ಹ್ಯಾಗತಿ
ನಿರ್ಮಲದ ಸಿದ್ಧಿಯನೆ ಪಡೆವರೂ ಅದನೆ ಕೇಳೆಂದಾ ೪೫

ಸುಮಾಲಿಕಾ:—

ಆವನ ದೆಶಿಂದ ಪ್ರಾಣಿಗಳ ಪ್ರವೃತ್ತಿಯೋ
ಆವನಿಂದೆಲ್ಲ ಜಗ ವ್ಯಾಪಿಸಿಹುದೊ
ಆ ಮಹಾತ್ಮನ ಸ್ವಕರ್ಮಗಳಿಂದಲರ್ಚಿಸುತ
ಈ ಮನುಜರಮಲಸಿದ್ಧಿಯ ಪಡೆವರೋ

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್
ಸ್ವಭಾವ ನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ೪೭

ಸಹಜಂ ಕರ್ಮ ಕೌಂತೇಯ ಸದೋಷಮಪಿ ನತ್ಯಜೇತ್
ಸರ್ವಾರಂಭಾಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ೪೮

ಅಸಕ್ತ ಬುದ್ಧಿ ಸ್ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ
ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ೪೯

ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಽಪ್ನೋತಿ ನಿಬೋಧಮೇ
ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ೫೦

ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽಽತ್ಮಾನಂ ನಿಯಮ್ಯಚ
ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯಚ ೫೧

---

ಪರ ಧರ್ಮಗಳನು ಚೆನ್ನಾಗ್ಯನುಷ್ಠಿಪುದರಿಂ
ಪರಮ ವಿಗುಣೋಪಿ ಕೇಳ್ತನ್ನ ಧರ್ಮ
ನರಗೆ ಶ್ರೇಯಃಪ್ರದ ಸ್ವಭಾವ ನಿಯತದ ಕರ್ಮ
ನಿರುತ ಆಚರಿಸೆ ಕಿಲ್ಬಿಷವೈದನೋ.

ಸಹಜ ಕರ್ಮವು ದೋಷಯುತವಾದಡಾಗಲಿ
ಇಹದಿ ಮರುಳಾಗ್ಯದನೆ ಬಿಡಲಾಗದು
ಸರ್ವ ಕರ್ಮಾರಂಭದಲ್ಲಿ ಕರ್ತೃತ್ವ ಮತಿ
ಸರ್ವ ದೋಷಕೆ ಅಧಿಕ ದೋಷವಾಗಿ

ಹೊಗೆಯಿಂದ ಅಗ್ನಿ ಮುಸುಕಿಪ್ಪಂತೆ ಲೋಕದಲಿ
ಬಗೆಬಗೆಯ ಕರ್ಮವು ಸದೋಷವಾಗಿ
ಇರುತಿಹುದದು ನಿಮಿತ್ತದಿ ಜೀವ ಕರ್ತೃತ್ವ
ಪರಿಹರಿಸಿ ಸಕಲ ಕರ್ಮದ ಫಲದಲಿ

ಸಕ್ತನಾಗದ ಜಿತಾತ್ಮನು ವಿಗತಸ್ಪೃಹೆಯುಳ್ಳ
ಭಕ್ತ ಪೂರ್ವೋಕ್ತ ಸನ್ಯಾಸದಿಂದ

ವಿವಿಕ್ತಸೇವೀ ಲಘ್ವಾಶೀ ಯತ ವಾಕ್ಕಾಯ ಮಾನಸಃ
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ೫೨
ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್
ವಿಮುಚ್ಯ ನಿರ್ಮಮ ಶ್ಶಾಂತೋ ಬ್ರಹ್ಮಭೂಯಾಯ ಕಲ್ಪತೇ ೫೩
ಬ್ರಹ್ಮಭೂತಃ ಪ್ರಸನ್ನಾತ್ಮಾ ನಶೋಚತಿ ನಕಾಂಕ್ಷತಿ
ಸಮಸ್ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ೫೪

---

ಇಷ್ಟವಲ್ಲದ ಸರ್ವ ಕರ್ಮ ನಾಶಾಖ್ಯ
ಉತ್ಕೃಷ್ಟವಾಗಿಹ ಸಿದ್ಧಿಯನ್ನೈದುವ
ಆ-ಪರಬ್ರಹ್ಮ(ಲಕ್ಷ್ಮಿ) ಪ್ರಾಪ್ತಿ ಅವನಿಗೆಂತಾಹುದೋ
ಸುಪವಿತ್ರ ಕೇಳದನು ಒರೆವೆನೀಗ
ಅಪರೋಕ್ಷ ಜ್ಞಾನ ಪ್ರಾಪ್ತಿಗೆ ಸಾಧಕವು ಎನಿಪ
ಸುಪವಿತ್ರ ನಿಷ್ಠೆಯನೆ ಯಾತರಿಂದ
ನರನು ಪಡೆವನೊ ಅದನೆ ಸಂಕ್ಷೇಪದಿಂದ ನೀ
ನರಿಯೊ ಎನ್ನಿಂದ ಹೇ ಪಾಂಡುಸುತನೆ
ಶುದ್ಧವಾದ ಬುದ್ಧಿಯಿಂದ ಕೂಡಿದ್ದವನು
ಶಬ್ದ ಮೊದಲಾದಖಿಳ ವಿಷಯಗಳಲಿ
ಸಕ್ತಿಯನೆ ಅಳಿದು ಧೈರ್ಯಾದಿ ಮನವ ನಿಗ್ರಹಿಸಿ
ಮುಕ್ತನಾಗಮಿತ ರಾಗದ್ವೇಷದಿ
ಪರಮ ವೈರಾಗ್ಯವಾಶ್ರೈಸಿ ಲಘು ಭೋಜನದಿ
ನಿರುತ ತನುಮನ ವಚನ ನಿಯಮಿಸುತಲಿ
ಪರಮ ಏಕಾಂತ ಪ್ರದೇಶವನೆ ಸೇವಿಸುತ
ಹರಿಧ್ಯಾನ ಯೋಗಪರನಾಗಿ ಕುಳಿತು
ಜರಿದು ಹಮ್ಮನೆ ಬಲವು ದರ್ಪ ಕಾಮ ಕ್ರೋಧ
ಪರಿಹರಿಸಿ ಅತ್ಯಾಸೆ ತ್ಯಜಿಸಿ ನಿರುತ

ಭಕ್ತ್ಯಾ ಮಾಮಭಿ ಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ
ತತೋಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಂ ೫೫

ಸರ್ವ ಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ
ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ೫೬

ಚೇತಸಾ ಸರ್ವ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ
ಬುದ್ಧಿಯೋಗ ಮುಪಾಶ್ರಿತ್ಯ ಮಚ್ಚಿತ್ತಃ ಸತತಂಭವ ೫೭

---

ದುರುಳರಿಂದಲಿ ಪ್ರತಿಗ್ರಹವಳಿದ ನಿರ್ಮಮನು
ಪರಮ ಶಾಂತನು ಬ್ರಹ್ಮ ಧ್ಯಾನಕವನು
ಅರಹನೆಂದೆನುತ ಕಲ್ಪಿಸಿ ಯೋಗ್ಯನೈ ಕೇಳು
ನರನೆ ಬ್ರಹ್ಮ ಧ್ಯಾನಿಯಾದ ನರನು
ಶೋಕಿಸನು ಪಾಪಫಲ ಬಹುದೆನುತ, ಕಾಂಕ್ಷಿಸನು
ನಾಕಾದಿ ಲೋಕ ಸುಖ ಬೇಕೆನುತಲಿ
ಘನ ಪ್ರಸನ್ನಾತ್ಮನಾಗೆಲ್ಲ ಪ್ರಾಣಿಗಳಲ್ಲಿ
ಅನುದಿನದಿ ಯೋಗ್ಯತೆಯ ಮೀರದಂತೆ
ಸಮನಾಗಿರುವನೆನ್ನ ಪರಮ ಭಕ್ತಿಯ ಪಡೆದು
ಅಮಲ ಸದ್ಭಕ್ತಿಯಿಂದಲಿ ಎನ್ನನು
ನಾನೆಷ್ಟು ಮಹಿಮನೋ ಎಂಥಾವನಾಗಿಹೆನೊ
ಆ ನಿಜವನರಿತು ತದನಂತರದಲಿ
ಅಪರೋಕ್ಷ ಜ್ಞಾನದಿಂದರಿತು ಎನ್ನನು ಬಳಿಕ
ಸುಪವಿತ್ರನಾಗೆನ್ನ ಸದನ ಹೊಗುವ ೪೬-೫೬

**ಆರ್ಯಾ:—**

ಸರ್ವ ಕರ್ಮಗಳ ಎನ್ನಾಶ್ರಯದಿಂ ಸರ್ವ ಕಾಲದಲಿ ಮಾಡುವನು
ಸರ್ವ ಶ್ರೇಷ್ಠನವ ಮತ್ಪ್ರಸಾದದಿಂ ಸರ್ವೋತ್ತಮ ಪದವೈದುವನು

ಮಚ್ಚಿತ್ತಸ್ಸರ್ವ ದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ
ಅಥ ಚೇತ್ತ್ವ ಮಹಂಕಾರಾತ್ ನ ಶ್ರೋಷ್ಯಸಿ ವಿನಂಕ್ಷ್ಯಸಿ ೫೮

ಯದ್ಯಹಂಕಾರಮಾಶ್ರಿತ್ಯ ನಯೋತ್ಸ್ಯ ಇತಿ ಮನ್ಯಸೇ
ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ೫೯

ಸ್ವಭಾವಜೇನ ಕೌಂತೇಯ ನಿಬದ್ಧಸ್ಸ್ವೇನ ಕರ್ಮಣಾ
ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋಽಪಿ ತತ್ ೬೦

ಈಶ್ವರಸ್ಸರ್ವ ಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ೬೧

ತಮೇವ ಶರಣಂಗಚ್ಛ ಸರ್ವಭಾವೇನ ಭಾರತ
ತತ್ಪ್ರಸಾದಾತ್ಪರಾಂ ಶಾಂತಿ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ೬೨

---

ಮನವಚನಗಳಿಂ ಸರ್ವಕರ್ಮಗಳ ಅನವರತೆನ್ನಲಿ ಅರ್ಪಿಸುತ
ಘನ ಬುದ್ಧಿಯ ಯೋಗವನಾಶ್ರೈಸನುದಿನ ಮತ್ಪರನಾಗುತ ಚಿತ್ತ ೨

ಎನ್ನಲಿ ನೆಲೆಗಾಣಿಸುವನಾಗ ಕೇಳೆನ್ನಲಿ ಮನವಿಡುತಿರಲೇನು
ಎನ್ನ ಪ್ರಸಾದದಿ ಸರ್ವ ದುರ್ಗಗಳ ಚೆನ್ನವಾಗಿ ದಾಟುವೆ ನೀನು ೩

ಪರಮ ಅಹಂಕಾರವನಾಶ್ರೈಸೀ ಪರಿ ಹೇಳಿದ ಎನ್ನೊಚನವನೇ
ನರನೆ ಗರುವದಿಂ ಕೇಳದ ಪಕ್ಷದಿ ಮರುಳನಾಗಿ ಕೆಡುವೆಯೊ ನೀನು ೪

ಪರಮ ಅಹಂಕಾರವನಾಶ್ರೈಸೀಪರಿ ಸ್ವಕೀಯ ಧರ್ಮದ ಯುದ್ಧ
ಜರಿದು ಮಾಡೆನೆಂದರಿದ ಪಕ್ಷದಲಿ ನರನೆ ಕೇಳು ಹೇಳುವೆ ಶುದ್ಧ ೫

ಮರುಳನಾಗಿ ನಿನ್ನೀ ವ್ಯವಸಾಯವು ಪರಮ ಮಿಥ್ಯವಾಹದು ಸಿದ್ಧ
ಹರಿಯಿಚ್ಛೆಯು ನಿನ್ನನು ಈ ಕಾರ್ಯದಿ ತ್ವರದಿ ನಿಯೋಗಿಪುದಿದು ಬದ್ಧ ೬

ಇದ ಮಾಡಲು ನೀ ಮೋಹದಲಿಚ್ಛೈಸದಲಿರೆ ನಿನ್ನ ಸ್ವಭಾವದಲಿ
ಉದಿತ ಸ್ವಕರ್ಮಗಳಿಂ ಬಂಧಿತನಾಗಿ ನನೆ ಮಾಳ್ಪೆ ಕೇಳವಶದಲಿ ೭

ಇತಿ ತೇ ಜ್ಞಾನ ಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ
ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ೬೩

ಸರ್ವಗುಹ್ಯತಮಂ ಭೂಯಶ್ಶೃಣುಮೇ ಪರಮಂ ವಚಃ
ಇಷ್ಟೋಽಸಿ ಮೇಧೃಢಮತಿ ತ [illegible] ಕ್ಷ್ಯಾಮಿ ತೇ ಹಿತಮ್ ೬೪

ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು
ಮಾಮೇ ವೈಷ್ಯಸಿ ಸತ್ಯಂತೇ ಪ್ರತಿಜಾನೇ ಪ್ರಿಯೋಽಸಿ ಮೇ ೬೫

---

ಈಶನಿಹನು ಸರ್ವ ಪ್ರಾಣಿಗಳ್ಹೃದ್ದೇಶದಿ ಎಲ್ಲ ಜೀವಿಗಳನ್ನು
ಭಾಸುರೇಚ್ಛೆಯಿಂ ಯಂತ್ರಾರೂಢರ ಗೈಸಿತಿರುಗಿಸುತಲಿಹನಿನ್ನು ೮

ನರನೆ ಕೇಳು ಆ ಹರಿಯನೆ ಸರ್ವ ಪ್ರಕಾರದಿ ಮೊರೆಹೊಗು ಅವನ್ವರದೀ
ಉರುತರ ಶಾಂತಿಯ ಶಾಶ್ವತ ಸ್ಥಾನವ ತ್ವರದಿಪಡೆದು ಸುಖಿಸುವಿ ಮುದದಿ ೯

ಇನಿತು ಗುಹ್ಯದೊಳ್ ಗುಹ್ಯಜ್ಞಾನವ ನಿನಗೆನ್ನಿಂದುಕ್ತವೊ ಇದನೆ
ಘನಮತಿಯಿಂದೆಲ್ಲವನೆ ವಿಮರ್ಶಿಸಿ ಮನನ ಮಾಡಿ ತಿಳಿ ಪಾಂಡವನೆ ೧೦

ತದನಂತರದಲಿ ಹ್ಯಾಗಿಚ್ಛಿಸುವೆಯೊ ಆದರಂದದಿ ನೀ ಮಾಡೆಂದು
ಯದುಪುಂಗವ ಉಪದೇಶ ಮಾಡಿದ ವಿಧವ ಕೇಳು ಕುರುಪನೆ ಇಂದು ೧೧

೫೭-೬೩

ಷಟ್ಪದೀ:—

ಮತ್ತೆ ಗೋಪ್ಯಗಳೆಲ್ಲರೊಳಗ
ತ್ಯುತ್ತಮದ ಅತಿ ಗೋಪ್ಯವನೆ ನಾ
ವಿಸ್ತರಿಸುವೆನು ನಿನಗೆ ಆ ಉತ್ಕೃಷ್ಟ ವಚನವನೆ
ಚಿತ್ತದಲಿ ಅವಧರಿಸು ನೀನತಿ
ಭಕ್ತಿಯುತ ಎನಗಿಷ್ಟ ದೃಢಮತಿ
ಮತ್ತದು ನಿಮಿತ್ತದಲಿ ಹಿತವನೆ ಒರೆವೆ ಕೇಳೆಂದ ೬

ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ
ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ೬೬

ಇದಂ ತೇನಾತಪಸ್ಕಾಯ ನಾಭಕ್ತಾಯ ಕದಾಚನ
ನಚಾ ಶುಶ್ರೂಷ ವೇವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ೬೭

ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ೬೮

---

ಮನವ ಎನ್ನಲಿ ನೆಲೆಗೊಳಿಸಿ ನೀ
ನನುದಿನದಿ ಮದ್ಭಕ್ತನಾಗ್ಯೆ
ಘನ ಸುಯಜ್ಞಗಳೆನ್ನಗೋಸುಗ ಯಜಿಸುತಿರು ಎನ್ನ
ಅನವರತ ನಮಿಸುತಿರೆ ಯ
ನ್ನನುಪಮದ ಪದನೈದುವೆಯೊ ನೀ
ನೆನಗೆ ಪ್ರಿಯನಿದು ನಿಜವು ಮಾಡುವೆ ಶಪಥವೆಂತೆಂದ ೬೫

ಪರಿಹರಿಸಿ ಇದಕನ್ಯ ಎಲ್ಲಾ
ಪರಿ ವಿರುದ್ಧದ ಧರ್ಮ ಮಾರ್ಗವ
ಮರೆಯನೈದಿರು ಎನ್ನ ಒಬ್ಬನ ಹೀಗಿರಲು ನಾನು
ನಿರುತ ನಿನ್ನನು ಸರ್ವ ಪಾಪದ
ಪೊರೆಗಳಿಂದಲಿ ಬಿಡುಗಡೆಯ ಮಾ
ಡಿರಿಸುವೆನು ಮತ್ಪುರದಿ ಶೋಕಿಸಬೇಡ ನೀನೆಂದ ೬೬

ನಿನಗೆ ಉಪದೇಶವನೆ ಮಾಡಿದ
ಘನ ಸುಗೀತಾಶಾಸ್ತ್ರ ಗೋಪ್ಯವು
ಅನುದಿನದಿ ಶುಶ್ರೂಷವಿಲ್ಲದ ನರಗೆ ಪಿಶುನರಿಗೆ
ಅನವರತ ತಪವಿಲ್ಲದಾತಗೆ
ಮನುಜರೊಳು ಮದ್ಭಕ್ತರಲ್ಲದ
ಜನಕೆ ಎನ್ನೊಳಸೂಯೆ ಯುತರಿಗೆ ಪೇಳ್ವವಲ್ಲೆಂದು ೬೭

ನಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ೬೯

---

ಆವ ನರನೀ ಪರಮ ಗುಹ್ಯವ
ಪಾವನದ ಮದ್ಭಕ್ತ ಜನಗಳಿ
ಗೀವನೋ ಉಪದೇಶ ಆ ಸತ್ಪುರುಷ ಎನ್ನಲ್ಲಿ
ಭಾವ ಶುಚಿಯಲಿ ಭಕ್ತಿಯನೆ ಮಾ
ಡೀ ವಿಮಲ ಮತ್ಪದವ ನೈದುವ
ಈ ವಿಷಯದಲಿ ಇಲ್ಲ ಸಂಶಯವೆಂದ ನಸುರಾರಿ ೬೮

ರಾಗ ರೇಗುಪ್ತಿ ಅಟತಾಳ

ಇವನತಿ ಪ್ರಿಯನೋ ಪಾರ್ಥನೆ - ಎನಗಿವ ಪ.

ಭುವನದಿ ತಾಪತ್ರಯದಿ ಬೆಂದವರಿಗೆಲ್ಲ
ತವಕದಿ ಗೀತಾಮೃತವ ನೆರೆಯುವನ್ಯಾರೊ ಅ.

ನರ ಸಂಘರೊಳಗೆ ಒಬ್ಬಾನೊಬ್ಬ
ನಿರ ಧರೆಯೊಳಗೆ ಪ್ರಿಯಕೃತ್ತಮ
ಪರಮ ಗೀತಾಶಾಸ್ತ್ರ ಉಪದೇಶ ಮಾಡುವ
ನರನೆಂಥ ಪ್ರಿಯನೊ ಎನಗೆ ಅಂಥಾ ಪ್ರಿಯರಿಲ್ಲ ೧

ಮತ್ತೊಬ್ಬ ಮುಂದೂ ಈದೃಶ ಪ್ರಿಯ
ಹುಟ್ಟಾನೆಂದೆಂದೂ ಭೂಲೋಕದಿ
ಉತ್ತಮ ಗೋಪ್ಯವಿದನ್ಯ ಭಕ್ತರಿಗೆಲ್ಲ
ಬಿತ್ತುತಾ ಚರಿಸುವ ನರ ಶ್ರೇಷ್ಠ ಧರೆಯೊಳು ೨

ಮಾನವನಿದನೆ ಅನವರತದಿ
ಜ್ಞಾನ ದಾನವನೆ ಮಾಡುತಲಿರೆ
ದೀನಪಾಲಕ ಇಂದಿರೇಶ ವಿಠ್ಠಲನಾ
ದಾನ ನೀವೆ ಮೋಕ್ಷ ಸುಖವ ಸುಲಭದಿ ಕೇಳೊ ೩

೬೯

ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದ ಮಾವಯೋಃ
ಜ್ಞಾನ ಯಜ್ಞೇನ ತೇನಾಹ ಮಿಷ್ಟಸ್ಸ್ಯಾಮಿತಿ ಮೇ ಮತಿಃ ೭೦
ಶ್ರದ್ಧಾವಾನನಸೂಯಶ್ಚ ಶೃಣು ಯಾದಪಿ ಯೋ ನರಃ
ಸೋಽಪಿ ಮುಕ್ತಶ್ಶುಭಾನ್ ಲೋಕಾ೯ ಪ್ರಾಪ್ನುಯತ್ಪುಣ್ಯ
[ಕರ್ಮಣಾಂ ೭೧
ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯ್ಯೈಕಾಗ್ರೇಣ ಚೇತಸಾ
ಕಚ್ಚಿದಜ್ಞಾನ ಸಮ್ಮೋಹಃ ಪ್ರಣಷ್ಟಸ್ತೇ ಧನಂಜಯ ೭೨

---

ಚತುಷ್ಪದೀಗದ್ಯಾ:—

ಯಾವ ನರ ಧರ್ಮಸಾಧಕವಾದ ನಮ್ಮ, ಈ
ಸಂವಾದ ರೂಪ ಗೀತೆಯ ನಧ್ಯಯನ ಮಾಳ್ಪ
ಆ ವಿವೇಕಿಯು ಮಾಳ್ಪ ಜ್ಞಾನ ಯಜ್ಞದಿ ನಾನು
ಅವನಿಯಲಿ ಯಜಿಸಿಕೊಂಬೆ. ೭೦

ಶ್ಲೋಕ:—

ತಿಳಿ ಹೀಗೆ ಎನ್ನ ಸಂಕಲ್ಪವಿಂತೆಂದೂ
ಮಲರಹಿತ ಶ್ರದ್ಧೆಯಲಿ ಯುಕ್ತನೆಂದೆಂದು
ಘನ ಅಸೂಯಾದಿ ದೋಷವನಳಿದ ನರನು
ಇನಿತಿದನೆ ಶ್ರವಣ ಮಾಡುತಲಿರಲು ಅವನು ೭೧
ಘನ ಪಾಪದಿಂ ಮುಕ್ತನಾಗಿ ಪುಣ್ಯವನೆ
ಅನುದಿನದಿ ಕೃತ ಕರ್ಮಗಳ ಲೋಕಗಳನೆ
ಪಡೆದು ಸುಖಭೋಗಿಸುತಲಿಹನು ಪಾಂಡವನೆ
ಕೆಡನು ಮದ್ಭಕ್ತನೆಂದೆಂದು ಕೇಳಿದನೆ
ಎಲೆ ಧನಂಜಯನೆ. ಏಕಾಗ್ರ ಮತಿಯಿಂದ
ಚಲಿಸದಿದು ಶೃತವಾಯಿತೇನೊ ನಿನ್ನಿಂದ
ಅಜ್ಞಾನ ಜನ್ಯ ಮೋಹವು ಕೆಟ್ಟಿತೇನೊ
ಸುಜ್ಞಾನ ದೊರೆತು ಮನ ಸ್ಥಿರವಾಯಿತೇನೊ ೭೨

ಅರ್ಜುನ ಉವಾಚ:—

ನಷ್ಟೋ ಮೋಹ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಽಚ್ಯುತ
ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ೭೩

ಸಂಜಯ ಉವಾಚ:—

ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ
ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಂ ೭೪

---

ಷಟ್ಪದೀ:—

ಚ್ಯುತಿರಹಿತ ಹರಿತ್ವತ್ಪ್ರಸಾದದಿ
ಸ್ಮೃತಿ ಲಭಿಸಿತ್ತೈ ಎನ್ನ ಮೋಹದ
ತತಿಯು ಕೆಟ್ಟಿತು ಜ್ಞಾನ ದೊರಕಿತು ಧನ್ಯನಾನಾದೆ
ಪತಿತಪಾವನ ತ್ವದ್ವಚನವನೆ
ಸತತ ಆಚರಣೆಯನೆ ಮಾಡುವೆ
ಗತ ಸುಸಂಶಯನಾದೆ ಯುದ್ಧಕೆ ನಿಂದೆ ನೋಡೆಂದ ೭೩

ಅಷ್ಟಪದೀ ಸಂಜಯಃ—

ಕುರುಪತಿಯೆ ಹೀಗೆ ಮಹಮಹಿಮನೆಂದೆನಿಸಿದಾ
ಹರಿಗೆ ಪಾರ್ಥಗೆ ನಡೆದ ಸಂವಾದದದ್ಭುತದ
ಪರಮ ರೋಮಾಂಚಕರವಾದ ಈ ಗೋಪ್ಯವನೆ
ಕುರುವರನೆ ನಾ ಕೇಳಿದೆ

ಪರಮ ಯೋಗೀಶನೆಂದೆನಿಸಿದಂಥಾ ಕೃಷ್ಣ
ಕರುಣದಲಿ ಸಾಕ್ಷಾತ್ಸ್ವಯಂ ಪಾರ್ಥಗುಪದೇಶಿ
ಸಿರುವ ಈ ಗುಹ್ಯತಮ ಪರಮ ಯೋಗವನೆ ವ್ಯಾ
ಸರ ಪ್ರಸಾದದಿ ಕೇಳಿದೆ ೭೪

ವ್ಯಾಸ ಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಂ
ಯೋಗಂ ಯೋಗೇಶ್ವರಾತ್ಕೃಷ್ಣಾತ್ ಸಾಕ್ಷಾತ್ಕಥಯತಸ್ಸ್ವಯಂ೭೫

ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದ ಮಿಮಮದ್ಭುತಂ
ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ೭೬

ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ
ವಿಸ್ಮಯೋ ಮೇ ಮಹಾನ್ರಾಜನ್ ಹೃಷ್ಯಾಮಿ ಚ ಪುನಃ ಪುನಃ ೭೭

---

ಪದ ಶ್ರೀರಾಗ ಅಟತಾಳ

ಶೃಣು ಭೂಪತೆ ಧೃತರಾಷ್ಟ್ರನೆ ಈಗಲೆ
ರಣದಲಿ ನಡೆದತಿ ಗೋಪ್ಯವನೆ ಪ.

ಯದುವರ ಕೃಷ್ಣಾರ್ಜುನರ ಪಾವನದ
ಅದುಭುತ ಸಂವಾದಗಳನ್ನೆ
ವಿಧವಿಧದೀಪರಿ ನೆನೆದು ನೆನೆದು ಮನ
ತುದಿ ಮೊದಲಿಲ್ಲದ ಹರುಷವನೆ ೧

ಮರಳಿ ಮರಳಿ ಐದನೆ ಕೇಳ್ಳೈ ನರ
ವರನೆ ವಿಶ್ವರೂಪವ ಧರಿಸಿ
ಮೆರೆವ ಹರಿಯ ಅತ್ಯದ್ಭುತ ಮಹಿಮೆಯ
ಸ್ಮರಿಸಿ ಸ್ಮರಿಸಿ ವಿಸ್ಮಯವೆನಗೆ ೨

ಜನಿಸುವುದೂ ಪುನಃ ಪುನಃ ನೆನೆದದು
ಘನ ಹರುಷದಿಯುತನಾಗುವೆನೊ
ಮನುಜಾಧಿಪ ಧೃತರಾಷ್ಟ್ರನೆ ಕೇಳ್ಳೈ
ಘನ ಸಿದ್ಧಾಂತ ವಚನವನ್ನೇ ೩

ಯತ್ರ ಯೋಗೀಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ
ತತ್ರ ಶ್ರೀರ್ವಿಜಯೋಭೂತಿ ರ್ಧ್ರುವಾನೀತಿರ್ಮತಿರ್ಮಮ ೭೮

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ **ಶ್ರೀಕೃಷ್ಣಾರ್ಜುನ ಸಂವಾದೇ**
**ಮೋಕ್ಷಯೋಗೋ**ನಾಮ
ಅಷ್ಟಾದಶೋಧ್ಯಾಯಃ

---

ಎಲ್ಲಿ ಯೋಗಿಗಳಿಗೊಡೆಯು ಕೃಷ್ಣನೋ
ಎಲ್ಲಿ ಪಾರ್ಥ ಧನು ಧರಿಸಿಹನೋ
ಅಲ್ಲಿ ರಾಜ್ಯ ಲಕ್ಷ್ಮಿಯು ನೀತಿಯು ರಣ
ದಲ್ಲಿ ವಿಜಯ ಐಶ್ವರ್ಯಗಳು ೪

ಧ್ರುವದಿಂದಲಿ ನೆಲೆಗೊಂಡಿಹುದೆನುತಲಿ
ಅವನೀಶನೆ ಎನ್ನಯ ಮತಿಯೊ
ಕವಿಗಳೊಡೆಯ ಇಂದಿರೆಪತಿ ವಿಠ್ಠಲ
ಅವತರಿಸಿಹ ಯದುಕುಲದಲ್ಲೀ ೫

೭೬-೭೮

ಇತಿ ಶ್ರೀಮದ್ರಾಮಚಂದ್ರಾಭಿದತನೂಜ ಶೇಷನಾಮಾಖ್ಯ
ವಿರಚಿತೇ **"ಗೀತಾರಂಜನಾ"**ಖ್ಯ ಗ್ರಂಥೇ
**ಸಕಲತತ್ವನಿರೂಪಣಯೋಗೋ**ನಾಮ
ಅಷ್ಟಾದಶೋಧ್ಯಾಯಃ



ಹರಿಃ ಓಂ

## ಮಂಗಳಾರತೀ ಪದ್ಯಾ

---

ಮಂಗಳ ಮಾರಮಣನಿಗೆ ಜಯ
ಮಂಗಳ ಯದುಪುಂಗವ ಹರಿಗೆ ಪ.

ಸತ್ಯಭಾಮೆಯ ವಲ್ಲಭ ಹರಿಗೆ ಎಲ್ಲಾ
ಭೃತ್ಯರ ಕರುಣದಿ ಪಾಲಿಪಗೆ
ಸ್ತುತ್ಯಗೆ ಮಂಗಳ ವಿಧಿ ಭವ ಮುಖರಿಗೆ
ನಿತ್ಯದ ಪದವಿಯ ಕೊಡುವವಗೆ ೧

ತುಂಗ ಮಹಿಮ ತುರು ಪಾಲಕಗೆ ನಿತ್ಯ
ಮಂಗಳಯೆನ್ನ ಹೃದ್ಗತ ಹರಿಗೆ
ಸಂಗೀತ ಲೋಲಗೆ ಕೌರವರನೆ ರಣ
ರಂಗದಿ ಕೊಲಿಸಿದ ಅನುಪಮಗೆ ೨

ಮಂದರ ಪರ್ವತವೆತ್ತಿದಗೆ ಸುರ
ವೃಂದಕೆ ಸುಧೆಯನೆ ಉಣಿಸಿದಗೆ
ಸುಂದರ ರೂಪಗೆ ಸುಸ್ಮಿತ ವದನಗೆ
ಇಂದಿರೆಪತಿವಿಠ್ಠಲ ಹರಿಗೆ ೩

॥ ಶ್ರೀ ಭಾರತೀಶಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

